# ಕಳೆದ ಪುಟಗಳು

" ಏಸು ತಾಳಿದರೇನು, ಏಸು ಬಾಳಿದರೇನು,
ಈಸು ಮುಗುಳದಲೆ ಆ ದಿವ್ಯದೃಷ್ಟಿ ? "

ರಾಮಚಂದ್ರ ವಿನೀತ

ಜೂನ್, ೧೯೪೭]

[ಬೆಲೆ ೧। ರೂ.

# ಪರಿವಿಡಿ

# ಮುನ್ನುಡಿ

ಶ್ರೀ ವಿನೀತರ (ಬೆಳಗಾವಿ ರಾಮಚಂದ್ರರಾಯರ) 'ಕಳೆದ ಪುಟಗಳಿ'ಗೆ ಮುನ್ನುಡಿಯ ಆವಶ್ಯಕತೆ ಇದೆ ಎಂದು ನನಗೆ ತೋರುವದಿಲ್ಲ. ಈ ಕವನಗಳೊಡನೆ ಪ್ರಕಟವಾಗಿರುವ ಅವರ ಟಿಪ್ಪಣಿ ಆ ಕೆಲಸ ಮಾಡಿದೆ. ಅದಲ್ಲದೆ ಇದರೊಡನೆಯೆ ಅವರ ಗದ್ಯ ಲೇಖನಗಳು ಮುದ್ರಿತವಾಗಿದ್ದರೆ ಈ ಮುನ್ನುಡಿ ತೀರ ಅನಗತ್ಯವಾಗುತ್ತಿತ್ತು. ಅವರ ಗದ್ಯವೆ ಅವರ ಪದ್ಯಕ್ಕೆ ಮುನ್ನುಡಿ; ಅವರ ಪದ್ಯವೆ ಅವರ ತತ್ತ್ವಕ್ಕೆ ಉದಾಹರಣೆಯಾಗಬಹುದಾಗಿತ್ತು. ಯಾಕೋ ಅವರಿಗೆ ಮೊದಲು ಹಾಗೆ ತೋರಲಿಲ್ಲ; ತೋರಿದಾಗ ಹಾಗೆ ಮಾಡುವದು ಅನುಕೂಲಿಸಲಿಲ್ಲ. ಇರಲಿ. ಅವರ ಗದ್ಯಪದ್ಯಗಳ ಬಗ್ಗೆ ನನ್ನ ಮೆಚ್ಚಿಗೆ ಹಳೆಯದು. ಅವರ 'ಭಾವದೇವಿ'ಗೆ ನಾನು ಮುನ್ನುಡಿ ಬರೆದು ಇಪ್ಪತ್ತು ವರ್ಷಗಳಾಗಿವೆ. ಶ್ರೀರಾಮಚಂದ್ರರಾಯರು 'ಜಯಕರ್ನಾಟಕ'ದ ಸಂಪಾದಕರೆಂದು ಕನ್ನಡ ನಾಡೇ ಬಲ್ಲದು. ಅವರ ಗದ್ಯಪದ್ಯಸಂಗ್ರಹ ಇಷ್ಟು ವರ್ಷಗಳ ನಂತರ ಪ್ರಕಟವಾಗುವದು ಕಾಲಮಹಿಮೆ. ಈ ಪ್ರಕಟನೆಯಿಂದ ಅವರ ನವಜೀವನಕ್ಕೂ, ನವಕೃತಿಗೂ ಬಾಗಿಲು ತೆರೆದಂತಾಗುವದೆಂದು ನಂಬಿ ನಾನು ಮುನ್ನುಡಿ ಬರೆಯುತ್ತಿದ್ದೇನೆ.

ಈಗ ಕನ್ನಡದಲ್ಲಿ ಒಂದು ಹೊಸ ಚೈತನ್ಯದೊಡನೆ ಹೊಸ ಶೈಲಿ ತಲೆದೋರುತ್ತಿದೆ. ಇಲ್ಲಿಯ ಶೈಲಿ ಅದರ ಪೂರ್ವಭಾವಿಯಾದ ಪ್ರಸವವೇದನೆಯ, ಅಸ್ಪಷ್ಟ, ಅದ್ಭುತರಮ್ಯ ಬಯಕೆಯ ಕಾಲದ್ದು. ಅರ್ಥದಲ್ಲಿ ಸಂಕೇತಮಯತೆ, ಶಬ್ದಾರ್ಥಗಳಲ್ಲಿ ಯೌಗಿಕತೆ, ಶಬ್ದದಲ್ಲಿ ನಾದಮಯ ಛಾಂದಸಿಕತೆ, ಭಾವಗಳ ಆದರ್ಶವಾದ, ವಿಷಯದ ಸ್ವಪ್ನಮಯ ಆವರಣ ಇವೇ ಮೊದಲಾದುವು ಇದಕ್ಕೊಂದು ಕ್ಲಿಷ್ಟತೆಯನ್ನು ತಂದರೆ(ಟಿಪ್ಪಣಿ ಅದನ್ನು ಕೆಲಮಟ್ಟಿಗೆ ಕಡಿಮೆಮಾಡುವದು), ಅದರ ಜೀವನೋತ್ಸಾಹ, ಚಿತ್ರಕಶಕ್ತಿ, ಭಾಷೆಯ ಬೆಡಗು, ಶೈಲಿಯ ಓಜಸ್ಸು, ಅನೇಕ ಸಾಲುಗಳ ಸಂಸ್ಮರಣೀಯ ಸೌಂದರ್ಯ, ಇವು

'ಕಳೆದ ಪುಟಗಳ'ಲ್ಲಿ ಉಳಿವ ಶಕ್ತಿಯು ಕುರುಹಾಗಿ ನಿಲ್ಲುವವು. ಶ್ರೀ ರಾಮಚಂದ್ರರಾಯರ ರಾಗಜ್ಞತೆ, ಚಿತ್ರ ಕೌಶಲ, ಭಾವ ವೈಶಾಲ್ಯ ಗಳು ಸಮರಸವಾಗಿ, ಅಖಂಡವಾಗಿ ಹರಿದಿದ್ದರೆ— ಅದು ಹರಿದೀ ತೆಂದು ನನಗೆ ಭರವಸೆಯಿದೆ; ಅವರ ಜೀವನ ವಿಶ್ವಾಸವನ್ನು ಮತ್ತೆ ಒತ್ತಿ ಹೇಳುವ ಈ ಸಂಗ್ರಹದ ಕೊನೆಯ ಪದ್ಯ 'ಪುನರುಚ್ಚಾರ'ವು ಅದರ ಸಂಚಕಾರವಾಗಿದೆ. ಕನ್ನಡ ಸಾಹಿತ್ಯದ ವೃಂದಸಂಗೀತದಲ್ಲಿ ಈ ಧ್ವನಿ ಕಳೆದುಹೋಗಬಾರದು. ಭಗವಂತನು ಅವರ ನವಜೀವನ ವನ್ನು ಹೊಸ ಕೃತಿಗಳಲ್ಲಿ ಹೊರಕ್ಕೆ ತರಲಿ ಎಂದು ಹಾರಯಿಸುವೆ.

ಈ ಕವನಗಳನ್ನು ಅವರು ತಮ್ಮ ಬಾಳಹೊತ್ತಿಗೆಯೊಳಗಿನ 'ಕಳೆದ ಪುಟಗಳು' ಎಂದು ಹೆಸರಿಸಿರುವರಾದರೂ, ನನ್ನ ದೃಷ್ಟಿಗೆ ಇವು ಉಳಿದ ಪುಟಗಳೆಂದೆ ತೋರುವದು. ಅದರೊಳಗಿನ ಬದುಕು ಕಾಲಾಧೀನವಲ್ಲ. ಜೀವನದ ವೀರೋತ್ಸಾಹವನ್ನು ವ್ಯಕ್ತಗೊಳಿಸುವ ಯಾವ ವಚನವೂ, ಸಾಲೂ, ಮಾತೂ ಗತಕಾಲಕ್ಕೆ ಸೇರಲಾರದು. ಅದು ಭವಿಷ್ಯತ್ತಿನ ಪಲ್ಲವಿ. ಪ್ರತಿಯೊಬ್ಬರ ಜೀವನದ ಕೆಚ್ಚಿನಲ್ಲಿ ಒಂದು ಬೆಳಕಿದೆ. ಅದಕ್ಕೆ ವಂಚಿತರಾಗಿ ನಾವು ಕೆಲಕಾಲ ಬಾಳ ಬಹುದು. ಆದರೆ ಅದು ನಮ್ಮನ್ನು ವಂಚಿಸುವದಿಲ್ಲ. ಅದು ತನ್ನ ಕಾಲವನ್ನು ಕಾಯ್ದು ತೆರೆಮರೆಯ ಸಿದ್ಧತೆಯಲ್ಲಿರುತ್ತದೆ. ಶ್ರೀ ರಾಮ ಚಂದ್ರರಾಯರು ಈ ಕೃತಿಯಿಂದ ತೆರೆಮರೆ ಸರಿಸಿ ಸಾಹಿತ್ಯರಂಗದಲ್ಲಿ ತಮ್ಮ ಪುಷ್ಪಾಂಜಲಿಯನ್ನು ಎರಚಿದ್ದಾರೆ. ರಸಿಕ ಲೋಕವು ಅದನ್ನು ಉಚಿತ ಸಹೃದಯತೆಯಿಂದ ಸ್ವಾಗತಿಸುವದು ಎಂದು ತಿಳಿಯುತ್ತೇನೆ. ಒಂದು ಬಗೆಯಲ್ಲಿ ಕವನವು ಶಬ್ದಾರ್ಥಸಹಿತವಾದರೂ, ಜೀವನಾಧಾರ ವಿಲ್ಲದದು ಶಬ್ದಮಾತ್ರ; ಅದು ಜೀವನದ ಧ್ವನಿಯಾಗಿ ಸಾರ್ಥವಾಗು ತ್ತದೆ, ಸಾರ್ಥಕತೆಯನ್ನು ಪಡೆಯುತ್ತದೆ. ಇದು ಅವರ ಭಾವದ ಹಾದಿ.

ಧಾರವಾಡ — **ದ. ರಾ. ಬೇಂದ್ರೆ**

ತಾ. ೨೦—೫—೧೯೪೭

# ಹಿನ್ನೋಟ

ಕಳೆದ ಬಾಳ ಹೊತ್ತಿಗೆಯ ಪುಟಗಳನ್ನು ಮಗುಚಿ ಹಾಕುತ್ತಿರುವಾಗ, ಕೆಲವು ಪುಟಗಳು ಕಳೆದು ಹೋದುದನ್ನು ಕಂಡೆ. ಅಲ್ಲಿ ಇಲ್ಲಿ ಬಿದ್ದ ಆ ಪುಟಗಳನ್ನು ಕಲೆಹಾಕಿ ನೋಡಿದಾಗ, ಉಳಿದ ಪುಟಗಳಿಗಿಂತಲೂ ಆ ಕಳೆದ ಪುಟಗಳೆ ಜೀವಕಳೆಯಿಂದ ತೊಳಗುತ್ತಿರುವುದನ್ನು ಕಂಡೆ. ನನಗೆ ಕಂಡ ಕಳೆ ಇತರರಿಗೂ ಕಾಣಲಿ ಎಂದು ಆ ಪುಟಗಳನ್ನು ಕಲೆಹಾಕಿ ಇಂದು ಓದುಗರೆದುರಿಗೆ ಇಡುತ್ತಿದ್ದೇನೆ.

ಈ ಸಂಗ್ರಹದಲ್ಲಿಯ ಮೊದಲ ಕವಿತೆ (ಕೊಳಲು) ಬರೆದದ್ದು–ನಾನು ೧೬ನೆಯ ವರ್ಷದವನಿದ್ದಾಗ. ಅದೀಗ ದಿವಂಗತ ಚಿದಂಬರ ಸಗರನ ಗೆಳೆತನ ನನಗೆ ಲಭಿಸಿತ್ತು. ಅವನ ಸಹವಾಸ ನನ್ನ ಜೀವನಕ್ಕೆ ಹೊಸದಿಕ್ಕನ್ನೆ ತೋರಿಸಿತು. ಸುಮಾರು ಒಂದು ವರ್ಷದೊಳಗಾಗಿಯೇ ನಾವು ಅಗಲಬೇಕಾಯಿತು,—ಅವನ ಆಧ್ಯಾತ್ಮದಾಹ ಅವನನ್ನು ಎತ್ತೆತ್ತಲೋ ಒಯ್ದಿತು; ಆ ಉರಿಯಲ್ಲಿಯೆ ಆತ ತನ್ನ ಜೀವನವನ್ನು ಮುಗಿಸಿದ. ಸಗರನು ಶ್ರೀ ಬೇಂದ್ರೆಯವರ ಸಮೀಪದ ಎಳೆಗೆಳೆಯ. ಸಗರನ ಮೂಲಕ ನನಗೆ ಶ್ರೀ ಬೇಂದ್ರೆಯವರ ಪರಿಚಯವಾಯಿತು; ಅದು ಬೇಗನೆ ಆದರ–ಪ್ರೇಮಗಳಲ್ಲಿ ಪರಿಣಮಿಸಿತು.

ನನ್ನ ತಂದೆಯವರ ಕಣ್ಣರಿಕೆಯಲ್ಲಿ ನಡೆದ ಅಧ್ಯಯನದಿಂದ ನನ್ನಲ್ಲಿ ವಾಙ್ಮಯದೃಷ್ಟಿ ಸಿದ್ಧವಾಗಿತ್ತು. ಸಗರನ ಸಹವಾಸದಲ್ಲಿ ನನ್ನ ಅಂತರಂಗ ಜೀವನವನ್ನು ಆಳವಾಗಿ ಶೋಧಿಸತೊಡಗಿದೆನು. ಆಗ ಉಂಟಾದ ಹೃದಯಜಾಗೃತಿಯು ಶ್ರೀ ಬೇಂದ್ರೆಯವರ ಸಾನ್ನಿಧ್ಯದಲ್ಲಿ ವಿಶಾಲ ಸಾಂಸ್ಕೃತಿಕ ದೀಕ್ಷೆಯನ್ನು ಪಡೆಯಿತು. ಜೀವನದ ಆಳದೊಡನೆ ಅದರ ಅಗಲ–ಎತ್ತರಗಳ ಅರಿವೂ ಬರತೊಡಗಿತು. ಈ ಮೂವರಿಗೂ ನಾನು ಚಿರಕೃತಜ್ಞನು.

ಈ ಸಂಗ್ರಹದೊಳಗಿನ 'ಭಾವದೇವಿ'ಯ ವರೆಗಿನ ಕವನಗಳು ಶ್ರೀ ಬೇಂದ್ರೆ ಹಾಗೂ ಬೇರೆ ಗೆಳೆಯರ ನಿಕಟ ಜೀವನ ಸನ್ನಿವೇಶದಲ್ಲಿ ಬರೆದುವು. ಮುನ್ನುಡಿಯಲ್ಲಿ ಶ್ರೀ ಬೇಂದ್ರೆಯವರು ಉಲ್ಲೇಖಿಸಿದ, ಈಗಿನ ಕನ್ನಡದಲ್ಲಿಯ ಹೊಸ ಚೈತನ್ಯ, ಹೊಸ ಶೈಲಿಗಳ 'ಪೂರ್ವ ಭಾವಿಯಾದ ಪ್ರಸವವೇದನೆಯ, ಅಸ್ಪಷ್ಟ, ಅದ್ಭುತರಮ್ಯ ಬಯಕೆಯ ಕಾಲ' ಅದಾಗಿತ್ತು. ಆಗಿನ ನನ್ನ ಹಾರಯಿಕೆ-ಹಂತೊರೆಯುವಿಕೆ-ಹೃದಯಾನುಭವಗಳನ್ನು ಅವುಗಳಲ್ಲಿ ಹರಿಬಿಟ್ಟಿದ್ದೇನೆ. ಮುಂದಿನ ಕವನಗಳಲ್ಲಿ ಬಹುಶಃ ಎಲ್ಲವೂ ಜಯಕರ್ನಾಟಕದ ಕೆಲಸಕಜ್ಜಗಳಲ್ಲಿ ಹೊತ್ತು ಸಿಕ್ಕಿದಾಗ ಬರೆದುವು.

ಶ್ರೀ ಬೇಂದ್ರೆಯವರು ವಾತ್ಸಲ್ಯಪೂರ್ವಕವಾಗಿ ಬರೆದ ಮುನ್ನುಡಿಯನ್ನು ನಾನು ಆಶೀರ್ವಾದವೆಂದೇ ಭಾವಿಸಿದ್ದೇನೆ. ಅದರೊಡನೆ ಅವರು ಭವಿಷ್ಯತ್ತಿನ ಒಂದು ಹೊಣೆಯನ್ನೂ ನನ್ನ ಮೇಲೆ ಹೊರಿಸಿರುವರೆಂಬುದನ್ನು ನಾನು ಬಲ್ಲದಿಲ್ಲ. ಆ ಹೊಣೆ ಹೊರಲು ನನ್ನನ್ನು ಪಾತ್ರನನ್ನೂ, ಸಮರ್ಥನನ್ನೂ ಮಾಡೆಂದು ದೈವೀಶಕ್ತಿಯಲ್ಲಿ ಬೇಡಿಕೊಳ್ಳುತ್ತೇನೆ.

ಸ್ವಂತದ ಮುದ್ರಣಾಲಯವಿದ್ದಾಗಲೂ ಈ ಕಳೆದ ಪುಟಗಳನ್ನು ಕಲೆಹಾಕಿ ಅಚ್ಚು ಹಾಕುವುದು ನನ್ನಿಂದಾಗಲಿಲ್ಲ. ಆರಾಮರಾಯನೆಂದು ಕೆಲ ಗೆಳೆಯರು ನನ್ನನ್ನು ಕರೆಯುತ್ತಿರುವುದು ಅನ್ವರ್ಥಕವೇ ಆಗಬಹುದಾಗಿತ್ತು. ಗೆಳೆಯರ ಒಲವಿನ, ಒತ್ತಾಯದ ಸಲಹೆಯಿಂದ ಈ ಸಂಗ್ರಹದ ಪ್ರಕಾಶನ ವಿಚಾರವು ತಲೆಯಲ್ಲಿ ಸುಳಿಯತೊಡಗಿತಾದರೂ, ಅದು ಕೃತಿಯಲ್ಲಿ ಬೇಗನೆ ಬರಲೇ ಇಲ್ಲ.

ಈ 'ಕಳೆದ ಪುಟಗಳು' ಕಳೆದುಹೋಗಿದ್ದವು. ನನ್ನ ಮನಸ್ಸಿನಿಂದ ಅವುಗಳ ನೆನಪೂ ಅಳಿದುಹೋಗಿತ್ತು. ಇಂತಹ ಸಂದುಕಟ್ಟಿನಲ್ಲಿ ಒಂದು ದಿವ್ಯಸಖ್ಯವನ್ನು, ಒಂದು ಸತ್ಯಪ್ರೇಮವನ್ನು ಅದೃಶ್ಯ ಶಕ್ತಿಯು ನನ್ನೆಡೆಗೆ ಕಳಿಸಿತು. ಆ ಸತ್ಯಪ್ರೇಮವೇ ಈ ಪುಟಗಳನ್ನು ಕಲೆಹಾಕಿ, ಸಾಹಿತ್ಯದೇವಿಯ ಸೇವೆಯನ್ನು ನಾನು ಮತ್ತೆ ಕೈಕೊಳ್ಳು

ವಂತೆ ನನ್ನನ್ನು ಹುರಿದುಂಬಿಸಿತು. ಆ ಪ್ರೇಮಸಿಂಚನದ ಫಲವಾಗಿ ಕಳೆಯದ, ಅಳಿಯದ ಪುಟಗಳು ನನ್ನ ಹೃದಯದ ಹೊತ್ತಿಗೆಯಲ್ಲಿ ಮತ್ತೆ ಬರೆಯಲ್ಪಡುವವೆಂದು ಹಾರಯಿಸಿದ್ದೇನೆ. ಈ ಕವನ ಸಂಗ್ರಹದ ಪ್ರಕಾಶನದ ಶ್ರೇಯಸ್ಸು ಆ ಸತ್ಯಪ್ರೇಮಕ್ಕೇ ಸಲ್ಲುತ್ತಿದೆ.

ಇನ್ನು ನನ್ನ ಹೊಸ ಹೆಸರಿನ ಬಗ್ಗೆ. 'ವಿನೀತ' ಎಂದು ನನ್ನ ಸಾಹಿತ್ಯನಾಮವನ್ನು ಪ್ರಚುರಪಡಿಸಬೇಕೆಂದು ಬಹುದಿನಗಳಿಂದ ಬಯಕೆಯಿದ್ದಿತು. ಮುಂದೆ ಅದನ್ನೇ ನನ್ನ ವ್ಯಾವಹಾರಿಕ ನಾಮವಾಗಿಯೂ ಬಳಸಬೇಕೆಂದೆನಿಸಿತು; ಆಮೇರೆಗೆ ಕಾನೂನಿನ ಪ್ರಕಾರ ತಕ್ಕ ಎತ್ತುಗಡೆಯನ್ನು ಮಾಡಲಾಗಿದೆ. 'ವಿನಯ' ಎಂದರೆ (ಸಂಸ್ಕೃತದಲ್ಲಿ) ಸಂಸ್ಕೃತಿ; 'ವಿನೀತ' ಶಬ್ದವು ಸಂಸ್ಕೃತಿವಾಚಕವಾಗಿದೆ.

ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಆತ್ಮೀಯತೆಯಿಂದ ಮುದ್ರಿಸಿ ಕೊಟ್ಟುದಕ್ಕಾಗಿ ಗೆಳೆಯ ಶ್ರೀ. ಕುಲಕರ್ಣಿ ಶೇಷಗಿರಿರಾಯರಿಗೆ ನಾನು ಕೃತಜ್ಞನಾಗಿದ್ದೇನೆ.

ಧಾರವಾಡ
ತಾ. ೧೩—೬—೧೯೪೭

**ರಾಮಚಂದ್ರ ವಿನೀತ**
(ಬೆಳಗಾವಿ ರಾಮಚಂದ್ರರಾಯ)

**ಮುಂದಿನ ಪ್ರಕಾಶನ (ಇದೇ ಗ್ರಂಥಕರ್ತರಿಂದ)**

## ರಸಸಾಧನ

(ಕಲಾತತ್ತ್ವವಿಚಾರವನ್ನು ಪೌರಸ್ತ್ಯ-ಪಾಶ್ಚಾತ್ಯ ದೃಷ್ಟಿಗಳಿಂದ ಕೂಲಂಕಷವಾಗಿ ಮಾಡಿ, ಸ್ವತಂತ್ರ ಸಮನ್ವಯವನ್ನು ನಿರೂಪಿಸುವ ಗ್ರಂಥ. ಇದರಲ್ಲಿ ಪ್ರತಿಭೆ, ಶ್ರುತಾಶ್ರುತ, ಕಲಾಯೋಗ ಮೊದಲಾದ ಪ್ರಬಂಧಗಳು ಬರುವವು. ಪ್ರಬಂಧಗಳೆನ್ನುವುದಕ್ಕಿಂತಲೂ ಗದ್ಯಗೀತ ಗಳೆಂದರೆ ಸಲ್ಲುವುದು. 'ಅವರ ಗದ್ಯವೆ ಅವರ ಪದ್ಯಕ್ಕೆ ಮುನ್ನುಡಿ; ಅವರ ಪದ್ಯವೆ ಅವರ ತತ್ವಕ್ಕೆ ಉದಾಹರಣೆ' ಎಂದು ಕವಿವರ್ಯ ಬೇಂದ್ರೆಯವರು ಅಂದುದು ಈ ಪ್ರಬಂಧಗಳನ್ನು ಕುರಿತು.)

# ಕೊಳಲು

**ರಾಗ–ಹರಿಕಲ್ಯಾಣಿ ಆದಿತಾಳ**

**ಈಶ ನಿನ್ನ ಚರಣಭಜನೆ । ಆಸೆಯಿಂದ ಮಾಡುವೆನು ॥**
**–ಎಂಬ ಕನಕರಾಯರ ಲಲಿತ ಪದದಂತೆ**

ಎನ್ನ ವನಜನಯನ ಕೃಷ್ಣ । ನಿನ್ನ ನುಣ್ಣಗೈಯಲೆಸೆವ
ಚಿನ್ನ ಚಿನ್ನ ಮುರಲಿಯಾಗ– । ಲೆನ್ನ ಬಯಕೆಯು
ಚೆನ್ನ ರಂಗ, ಮಂಗಲಾಂಗ । ನಿನ್ನ ಹಸ್ತಸಂಗದಿಂದ
ಧನ್ಯಧನ್ಯಳನ್ನು ಮಾಡು । ಎನ್ನ ಕೇಶವಾ !

ಸುಂದರಾಂಗ, ಕಂದ ರಂಗ । ಅಂದಗೈಯೊಳೆನ್ನ ಪಿಡಿದು
ಮಂದಹಾಸದಿಂದ ಮುದ್ದು- । ಗೊಂಡು ಮನ್ನಿಸೈ
ಚಿಕ್ಕ ಕೈಯ ಬೆರಳಿನಿಂದ । ಅಕ್ಕರದಲಿ ಚಪ್ಪರಿಸುತ
ಮಿಕ್ಕಿ ಬರುವ ಹರುಷದಲೆಗ- । ಳುಕ್ಕಿಸೆದೆಯಲಿ

ಎನ್ನ ಮುದ್ದು ಕೊಳ್ಳಬರುವ । ನಿನ್ನ ಮುದ್ದು ಪವಳದುಟಿಯು
ನನ್ನಿಯಿಂದ ನಲಿದು ಕುಣಿವು- । ದೆನ್ನ ಚೆನ್ನಿಗಾ !
ಓರೆತುಟಿಯೊಳೆನ್ನ ಪಿಡಿದು । ಓರೆಗಣ್ಣಿನಿಂದ ನೋಡಿ
ಬಾರೆಬಾರೆ ಬಾರಿಸಯ್ಯ । ಚಾರುಗಾತ್ರನೇ !

ಶ್ರೀಶ, ಶಶಿಸಮಾಸ್ಯದಲ್ಲಿ । ಸೂಸುವೆಸೆವ ಹಾಸಜ್ಯೋತ್ಸ್ನೆ
ಆಸೆಯಿಂ ಚಕೋರಿಯಂತೆ । ಸೋಸಿ ಕುಡಿವೆನೈ
ಕಂದ ಕೃಷ್ಣ, ಮೋಹದಿಂದ । ಅಂದ ಮೊಗದಿ ಸುಯ್ವು ಕಂಪಿ-
ನಿಂದಲೆನ್ನ ತುಂಬಿಸೆದೆಯ । ನಂದನಂದನಾ !

ಭೇದವನ್ನು ತೊರೆಯುತೆನ್ನ- । ನೂದಿಯೂದಿ ಮೋದದಿಂದ
ನಾದಬ್ರಹ್ಮದಿಂದಲಿಡಿಸು । ವೇದವಂದ್ಯನೇ !
ಜ್ಞಾನಸದನ, ನಿನ್ನ ಪ್ರೇಮ- । ಗಾನದಿಂದ ಹೃದಯ ತುಂಬಿ
ಗಾನಲೀನವೆಲ್ಲ ಜಗವು । ಮೀನನಯನನೇ !

೧೮–೧೦–೨೧

# ನೋಡಿ-ಮಾಟ

ಪಾಪದ ಗಂಟಿನಲಿ | ಪಡೆಯುವೆ ಪುಣ್ಯದ ಪವಳವನು
ಕೋಪದ ಪೋಡದಲಿ | ನೋಡುವೆ ಶಾಂತಿಯ ಕಾಂತಿಯನು

ಕಬ್ಬಿನ ಬಿರುಸಿನಲಿ | ಸವಿಯುವೆನೈ ಸವಿರಸವನ್ನು
ಕಬ್ಬಿಣ-ಕಪ್ಪಿನಲಿ | ಪರಿಸದಿ ಮಾಡುವೆ ಪೊನ್ನನ್ನು

ಹೆಬ್ಬುಲಿ ಕೆಚ್ಚಲಲಿ | ಕುಡಿಯುವೆ ಕೆಚ್ಚಿನ ಹಾಲನ್ನು
ಹೆಬ್ಬಾಪ್ಹೆಡೆಯಲ್ಲಿ | ಹೊಳೆಯುವ ರನ್ನವ ನೋಡುವೆನು

ಕಡಲಿನ ಸಿಂಪಿನಲಿ | ನೀರನು ಮಾಡುವೆ ಮುತ್ತನ್ನು
ಕಡು ಕಟು ವಿಷದಲ್ಲಿ | ಕಡೆಯುವೆನಮೃತದ ಬೆಣ್ಣೆಯನು

ಮುಳ್ಳಿನ ಕಂಟಿಯಲಿ | ಕೊಳ್ಳುವೆ ಕೋಮಲಸುಮನವನು
ಸಲ್ಲದ ಕಲ್ಲಿನಲಿ | ಕಟೆಯುವೆ ಮಾಟದ ಮೂರ್ತಿಯನು

ಹೊಲಗೊಬ್ಬರದಲ್ಲಿ | ಬೆಳೆಸುವೆ ವರಸುರತರುವನ್ನು
ಎಳೆಗಾಯ್ಸುರಟೆಯಲಿ | ಕುಡಿಯುವೆ ಸೀ ಸೀಯಾಳವನು

ಕತ್ತಲೆ ಬಸುರಿನಲಿ | ನೋಡುವೆ ಮೂಡುವ ಬೆಳಕನ್ನು
ಚಿತ್ತದ ತಿಕ್ಕಲಲಿ | ತಾಳುವೆ ತೇಲುವ ತಿಳಿವನ್ನು

ಬೆಟ್ಟದ ಕೂಟದಲಿ | ಕಟ್ಟುವೆನರಸನ ಪಟ್ಟವನು
ಕಟ್ಟಾದಡವಿಯಲಿ | ಕಾಣುವೆ ಕದಲದ ಕೊಳವನ್ನು

ನೀಗದ ಮಾಗಿಯಲಿ | ಹಿಗ್ಗುವ ಸುಗ್ಗಿಯ ಕೋರುವೆನು
ನಾಗದ ಸುತ್ತಿನಲಿ | ಪಡೆಯುವೆ ತನಿಬಾವನ್ನವನು

ತಿರುಗುವ ತಿಗರಿಯಲಿ | ಮಾಡುವೆ ಮಣ್ಣಿನ ಮಡಿಕೆಯನು
ಕರಿಬಿರುಗಲ್ಲಿನಲಿ | ನೋಡುವೆ ಸಿಡಿಯುವ ಸೆಲೆಯನ್ನು

ಸೂಚಿಸದುಲಿಗಳಲಿ | ಕೇಳುವೆ ಸಮರಸಗೀತಿಯನು
ಗೀಚಿದ ಗೆರೆಗಳಲಿ | ಬರೆಯುವೆ ಚೆಲ್ವಿನ ಚಿತ್ರವನು

## ಎರಡು ಶಕ್ತಿಗಳು

ಮುಂಜಾವ ಮಂಜಿನಲಿ ಯಾವೆರಡು ಶಕ್ತಿಗಳು
ಕೈಮಾಡಿ ಕರೆಯುತಿಹವು?
ನಾ ಮುಂದೆ ನೀ ಮುಂದೆಯೆಂದು ಮಮ ಮನವನ್ನು
ತಿಳಿಯದಂತೊಲಿಸುತಿಹವು?

ಪಂಚಪ್ರಾಣಗಳುರಿವ ಪಂಚಾಗ್ನಿಯಜ್ಞವಿದು ಮೂಡಲಲಿ
ಬೆಳಗುತಿಹುದು!
ಸೂಚಿಸದ ಸೊಲ್ಲುಗಳ ಸಂಭ್ರಮದ ಸಂಗೀತದಿಂ ಸೃಷ್ಟಿ
ಸ್ತುತಿಸುತಿಹುದು!

ಓರ್ವ ಶಕ್ತಿಯು ಕಣ್ಗೆ ಕಾಣಿಸದೆ ಕಿವಿಯ ನೆರೆಯಲಿ
ಮೆಲ್ಲನುಲಿಯುತಿಹುದು!
ಕಿವಿಯು ಲಾಲಿಸದೆ, ಮಮ ಮನವೆ ಚೇತನೆಗೊಂಡು
ಸ್ಫೂರ್ತಿಯಿಂದಲೆಯುತಿಹುದು!

"ಕತ್ತಲೆಯ ಕಂಬಳಿಯ ಹೊತ್ತು ಜಗವೆಲ್ಲವೂ
ಬಿದ್ದಿಹುದು ನಿದ್ದೆಯಲ್ಲಿ!
ಕಣ್ಣಿದ್ದು ಕುರುಡರೂ, ತಿಳಿವಿದ್ದು ಬಧಿರರೂ
ಜನರೀ ಪ್ರಪಂಚವಲ್ಲಿ!

"ಏಳು ಕಂದನೆ! ನೋಡು ಸಪ್ಪಗಿನ ಮುಪ್ಪಾಯ್ತು
ಹರತಾದ ಹರೆಯ ಹುರುಪು!
ಕಿವಿಯಲ್ಲಿ ಸಾಮಮಂತ್ರದ ಬೀಜ ಜಪಿಸುವೆನು,
—ಮಾಡೆನಗೆ ಮನದ ಮುಡುಪು!

"ಹೃತ್ಕಮಲದಲದಲ್ಲಿ ರಕ್ತಬಿಂದುವಿನಿಂದ
ಹಾಡನ್ನು ಬರೆದು ಹಾಡು!
ಏಳೇಳು—ಮುಂಗೈಗೆ ರಕ್ಷೆಯನು ಕಟ್ಟಿಹೆನು:
ಕಹಿಯಡಿಗೆ ಸವಿಯ ಮಾಡು!"

† † † †

ಮತ್ತೊರ್ವ ಶಕ್ತಿಯಿದು ಕಣ್ಣೆದುರಿನಲಿ ನಿಂತು
ಸನ್ನೆಯಿಂದುಲಿಯುತಿಹುದು!
ಕಣ್ಗೆ ಕಾಣದಲೆ, ಮಮ ಮನವೆ ಚೇತನೆಗೊಂಡು
ಸ್ಫೂರ್ತಿಯಿಂದಲೆಯುತಿಹುದು!

"ಕತ್ತಲೆಯ ನಂಜೇರಿ ಸತ್ತಂತೆ ಜನರೆಲ್ಲ
ಬಿದ್ದಿಹರು ಮುಗ್ಧರಾಗಿ!
ಸುಧೆಯ ಸವಿಯನು ಬಿಟ್ಟು ಸುರೆಯ ಸಾವನು
ಸೇವಿಸುವರು ಹತಬುದ್ಧರಾಗಿ!

"ಬಣ್ಣಬಣ್ಣಗಳಿಂದ ಕಣ್ಗಳರಸನು
ವಿಶ್ವಚಿತ್ರವನು ಚಿತ್ರಿಸುವನು!
ಕಂಪ, ಕಂಡದ್ದನ್ನು ಮನದಣಿಯುವಂತುಂಡು,
ಬೀರು ನನ್ನಯ ಬೆಳಕನು!

"ವಿಶ್ವಕರ್ಮನ ಕೃತಿಯ ಸೊಂಪುಸೊಗಸನು ನೋಳ್ಪ
ವಿಬುಧರು ನಿಲಿಂಪರಹರು!
ಜಗವ ಜಾತ್ರೆಯ ಜನರು, ತರಳ, ತವ ಕರ್ಮವನು
ಮುಚ್ಚದೆವೆಯಿಂ ನೋಳ್ಪರು!"

೭-೮-೨೨

# ಕುರುಡ

ಒಂದು ಸಲವೇ ನಿನ್ನ, ಒಂದೆ ನಿಮಿಷದ ವರೆಗೆ
ಅಂದ ಮೂರುತಿ ತೋರು; ಕಣ್ತುಂಬ ನೋಡುವೆನು!
ಹಿಂದುಗಡೆ ನನ್ನೆರಡು ಕಣ್ಣುಗಳ ಕಳೆದುಬಿಡು,
ಕುರುಡನನ್ನಾಗಿ ಮಾಡು!

ಇನಿತು ದಿನಗಳ ವರೆಗೆ ನನ್ನ ಹೃದಯದ ಮೇಲೆ
ಮನೆಮಾಡಿಕೊಂಡಿರುವ ನೆನಪುಗಳನಳಿಸಿ ಬಿಡು
ಮನಮೋಹಿಸುವ ತೆರದಿ ಮಿನುಗುತಿಹ ಕನಡಿಯೊಲು
ತೊಳೆತೊಳೆದು ಹೊಳಪ ನೀಡು!

ಸಡಗರದ ಕರದಲ್ಲಿ ಪಿಡಿದು ನೋಡಿದೊಡೆ, ತವ
ಪೊಡವಿಯನೆ ಮೋಹಿಸುವ ಮಿಡಿನಗೆಯ ನುಣ್ಮೊಗದ
ಪಡಿನೆಳಲದಲ್ಲದಲಿ ಕಡುಮೆರೆವ ಮತ್ತಾವ ಮೂರುತಿಯು
ಕಂಗೊಳಿಪುದು?

ನಿನ್ನ ಕನಸೇ ಕನಸು, ನಿನ್ನ ನನಸೇ ನನಸು
ನಿನ್ನ ಧ್ಯಾನವೆ ಧ್ಯಾನ, ನಿನ್ನ ಗಾನವೆ ಗಾನ
ನಿನ್ನ ಕಾಮವೆ ಕಾಮ, ನಿನ್ನ ಪ್ರೇಮವೆ ಪ್ರೇಮ—ನಿನ್ನದೆಲ್ಲವು
ಎನ್ನದು!

ಕಂಗಳಿಲ್ಲದಲೆ ನಿನ್ನಂಗವನು ನೋಡುವೆನು
ಅಂಗವಿಲ್ಲದೆ ನಿನ್ನ ಸಂಗವನು ಕೋರುವೆನು
ಇಂಗಿತಿಲ್ಲದೆ ನಿನ್ನ ಮಂಗಲತೆಯನು ನುಡಿವ
ಸಂಗೀತವನ್ನುಲಿವೆನು!

ಅಂತಪಿರುವೆಡೆಯಲ್ಲಿ ಗರ್ಭಗುಡಿಯನು ಕಟ್ಟಿ
ಅಂತವಿಲ್ಲದ ನಿನ್ನ ಮೂರ್ತಿಯನು ನೆಲೆಗೊಳಿಸಿ
ಅಂತರಂಗದ ಕಾಂತ, ನಾಲಿಗಿಲ್ಲದೆ ನುಡಿವ
ಸಂಗೀತವನ್ನುಲಿವೆನು!

# ಉಷೆ

ನಲ್ಲನೇಳುವ ಮುನ್ನ, ಧಾರುಣಿಗೆ ಸೀರ್ಪನಿಯು
ತಿಳಿಯ ತಳಿಯನು ಹಾಕಿ, ಮೂಡಲಿನ ಹೊಸಲಿಂಗೆ
ಕೆಮ್ಮಣ್ಣ ಸಾರಣೆಯ, ಪೊಂಬಣ್ಣ ಕಾರಣೆಯನಾವ ಸತಿ
ಮಾಡುತಿಹಳೋ ?

ಹಾಲ್ಬೆಳ್ಳಿಯೊಲು ಬೆಳಗುತಿಹ ಬೆಳ್ಳಿ-ಮೂಗುತಿಯು
ಹಣೆತುಂಬ ಕುಂಕುಮವು, ಗಲ್ಲದಲ್ಲರಸಿಣವು
—ಈ ಬಗೆಯ ಕರದಿ ಹಾಲ್ದಿನೆ ತಾಳ್ದ ಮುತ್ತೈದೆ
ಬೆಳವಲೊಕ್ಕಲಿತಿಯುವಳೋ ?

# ಕವಿ ರವೀಂದ್ರರಿಗೆ

ತಾರೆಗಳ ಪೊಂಧೂಳಿಯಲಿ ಕ್ರೀಡಿಸಿದ ನೀನು
ಧಾರುಣಿಯ ಹೂಹುಡಿಯೊಳಾಡಲೊಲ್ಲೆನಲಿಲ್ಲ !
ಧೀರ ಭಾರತವೀರ ! ದಿಗ್ವಿಜಯ ಮಾಡಿನ್ನು,
ಮುನಿವರರ ತಪದ ಸೈಪೇ !

ದೀಪಕಲ್ಯಾಣರಾಗವಸಿಂಚರದಿ ಪಾಡಿ,
ದೀಪಗಳ ಕುಡಿಗಳಿಂ ಕತ್ತಲೆಯ ಕತ್ತರಿಸಿ,
ದೀಪಾವಳಿಯ ಹಬ್ಬ ದುಂದುಮಾಡೈ ಜಗದಿ,
ಸರಸತಿಯ ಕೋರಲ ಹಾಡೇ !

## ಪಶ್ಚಾತ್ತಾಪಪೂರ

ಚಿತ್ರವೆನ್ನುವ ಕೀರ್ತಿ ಶುದ್ಧಿ ಬುದ್ಧಿಯ ಕದ್ದು
ಎತ್ತ ಹೋಯಿತೊ—ಕಾಣೆ !—ಕಟ್ಟಾದ ಕಾಡಿನಲಿ !
ಸತ್ಯವೆನ್ನುವ ಸತಿಯ ಕೆಣಕಿ ಹಾ ! ಕೆಟ್ಟೆನೇ !!
ದಿವ್ಯಪದಭ್ರಷ್ಟನಾಗಿ !!!

ಹತ್ತುಸಾಸಿರ ಕಣ್ಣಳೀಗ ಕಲ್ಲಾದವೇ !
ಮತ್ತೆ ಜಗೆಬಯಲೀಗ ಬಯಲಾಗಿ ಹೋಯಿತೇ !
ಭೂತಕಾಲದ ಭೂತವಕಟ ! ಕುಣಿಯಿಂದೆದ್ದು ಕುಣಿಯುತಿದೆ
ಕ್ರೂರವಾಗಿ !

ನನ್ನ ವೃಣ್ಣನ, ಸಾರ್ವಭೌಮ ಸೌಂದರ್ಯವೇ !
ಹೊನ್ನಾಗ ಬಯಸುತಿದೆ ಮನಸಾರೆ ನಿನ್ನಿಂದು !
ನನ್ನ ಜಡಕಾಯವಿದು ಕಣ್ಣುಕಣ್ಣಾಗಿ ಕಾಣಲು ಬಂತು
ಕಾದುಕಾದು !

× × × ×

ಬದ್ಧಬುದ್ಧಿಯ ಬೂದಿ ಶುದ್ಧಿಸುವ ಜಾಹ್ನವಿಯೆ !
ಉದ್ಧರಿಸ ಬಾ ! ಬಾರೆ ! ಬಿದ್ದ ಮನ್ಮನವನ್ನು
ಬುದ್ಧನಾಗುವೆ—ನನ್ನಿ ! ಶುದ್ಧನಾಗುವೆ—ನನ್ನಿ !
ಸಿದ್ಧನಾಗುವೆನು ನನ್ನಿ !

× × × ×

ನನ್ನಯ ವಿಚಾರಗಳ ಗೋವುಗಳ ಕಾಯಲ್ಕೆ
ಚೆನ್ನ ! ಬಾ ! ಬಾ !! ಗೊಲ್ಲನಾಗಿ, ನಲ್ಮೆಯ ನಲ್ಲ !
ಮುನ್ನ ಮುರಲಿಯ ನಾದಮೋದದಲಿ ಮೇಳಯಿಸು
ನನ್ನ ಮೈಮನಗಳನ್ನು !

× × × ×

ಜೀವಕುವರಿಯು ಸಾಜಸಿಂಗಾರವಾಗಿಹಳು !
ಭಾವಭಕುತಿಗೆ ಸಾಕ್ಷಿಯಾಗಿ, ಮಂಗಲೆಯರೇ,
ಜೀವದೇವರ ಮದಿವೆಯಾಗುತಿದೆ. ಪಾಡಿರೇ !
'ಸುವ್ವಿಸೋಬಾನೆ' ಯಿನ್ನು !!

೭-೭-೩೩

# ಅಭಯವಾಣಿ

ಕಣ್ಣುಗಳ ಕಾಣಿಕೆಯು, ಕಣ್ಣ ರಾಣೀ!
ಕೈಗೊಂಡು। ಕಿವಿಯ ಗವಿಯಲಿ ಕೂಗಿ ಹೋಗು ಜಾಣೀ!

ಮನಸೆಂಬ ಸೆರೆಮನೆಯ ಹಣತಿಯಿಂದು
ನಂದುವದೆ। ಮನ್ನಿಸನು ಮನದ ಮನವನ್ನ ನೆಂದು?

ಬೇಟವೋ? ಮಾಟಗಾರನ ಬಿಟ್ಟಿಯೋ?
ಮರುಳು ಮನ-। ದೋಟವೋ? ಬಿಸಿಲುಗುದುರೆಯ ಬೇಟೆಯೋ?

ಕನಕರಿಸಿ ಕಾಣುವದು ನೆನಪೊ, ನೆನಸೋ?
ಬೇತಾಳ। ಭೂತಗಳ ಬೆಂಬತ್ತಿ ಬರುವ ಕನಸೋ?

* * * *

ಕಣ್ಣುಗಳು ಕುಕ್ಕಿದರು, ಕಾಣು; ಬಂದೆ!
ಬಡಭೀತಿ-। ಭೂತವನು ಬೆದರಿಸುವ ಮಂತ್ರ, ಅಂದೆ!

ನಿನ್ನ ಮನದರಮನೆಯ ದೀಪವಿಂದು
ಕಂದುವದೆ?। ಅಂದ ನಂದಾದೀಪ ನಂದದೆಂದೂ!

ಮಾಟಗಾರನ ಮಾಟವಲ್ಲ, ಆಟ!
ಗೀರ್ವಾಣ। ವಾಣಿಯಿದು! ಸವಿನೋಟವಲ್ಲ, ಊಟ!

ತಿಳಿದು ಅಳಿಯುವ ತೆಳ್ಪು, ತಳವು ಅಲ್ಲ!
ಬೆಳಬೆಳಗಿ। ಹೊಳೆದು ಉಳಿಯುವ ಹೊಳೆವ ಹೊಳಪು ಎಲ್ಲ!

ನೆನೆಸುವಂತಹ ಮನಸು ಅಲ್ಲ! ಅಲ್ಲ!
ನನ್ನಿಯಿದು!। — ಅನಿಸುವಂತಹ ನೆನಸು ಎಲ್ಲ! ಎಲ್ಲ!

೨೩-೭-೧೯೨೩

## ಪ್ರತಿಭೆಗೆ—

ಮುಸುಗ ಮುಸುಕುಪಿಯೊಂದೆ, —ಹೊಂಬಿಸಿಲಿನರಳಿಸುವ.
ಹೊಸಚೆಲ್ವಿಕೆಯ ನವಿಲನೇರ್ದ ಹೊಸಹೊಸಸಿರಿಯೆ!
ಪ್ರಿಯಯಾದ್ಯ ಕನಕಸುಡ! ನವನವೋನ್ಮೇಷಗಳ ಮಾತೆ!
ಅನಿಮೇಷನಾದೆ!
ಹೊಸಗೆಯೋ! ಜೇಟವಿಲ್ಲದ ಕೂಟ ನಿನ್ನದದು!
ಹೊಸಗೆಯೋ! ಬಯಕೆಯಿಲ್ಲದ ಬಸಿರು ನಿನ್ನದದು!
ದಶಕೋಟಿಪುತ್ರಸೌಭಾಗ್ಯವತಿ ಸ್ವರ್ಗಂಗೆಯಂಥವರ ಹೆತ್ತ
ಸತಿಯೋ!

ಅಕ್ಷರರ ಮುನ್ನ ನೀನಿದ್ದೆಯೌ ಮಹಾಮಾಯೆ!
ಅಕ್ಷಯ್ಯವಾಗಿರ್ದ ನಕ್ಷತ್ರರಾಶಿಗಳ
ಅಕ್ಷರಗಳಂ ಬರೆದ ಪ್ರಭಾಸವಿತ್ರದ ಪ್ರಭೆಯೆ! ಪ್ರತಿಭೆಯೋ!
ಪಾಹಿ! ಪಾಹಿ!!
ಅಕ್ಷಿಯುಗಲದಿ ನೀನು ವಿಶ್ವವಂ ನೋಡಿದೊಡೆ
ಲಕ್ಷಗಟ್ಟಲೆ ಕಣ್ಣುಗಳು ಮೂಡಿ ನೋಡುವವು!
ಲಕ್ಷ್ಮಿಮಾಯೆ! ರಸರಾಜ್ಯಸಮ್ರಾಜ್ಞಿ ಸಾವಿತ್ರಿ ಗಾಯತ್ರಿಯಲ್ಲೆ
ನೀನು?

ಹೊಸರಸದ ಹಾಲ್ತೊರೆಯು ಹೊರಹೊಮ್ಮಿ, ಸಲೆಚಿಮ್ಮಿ.
ಹಸಿಹಸಿವ ಬಿಂಗಸುವ ಸವಿಗವಲ ಗುಟುಕರಿಸಿ
ಹಸುಳ ಬ್ರಹ್ಮನು ಹೊಸಬನಾಗಿಯೂದಿದನಲ್ಲ ನವನಾದ-
ವೇದವನ್ನು!
ರಸಿಕರರಸಿಯೆ! ನಿನ್ನ ವರಸುತ್ತಲರಸುತ್ತ
ರಸ-ರಾಜಹಂಸವಾಹನನಾಗಿ ನಿನ್ನೆಡೆಗೆ
ಅನುಮಾನಹನದಿಂದ ಸತ್ಯಲೋಕದ ಸತಿಯೆ! ಬಂದನೌ
ಕಂದನೀಗ!

ಜೀವನಾಂಭೋನಿಧಿಯ ಮಧ್ಯದಲ್ಲರಳಿರುವ
ಭಾವಕಮಲದ ಮೃದುಲಕೋಮಲಾಸನದಲ್ಲಿ
ಜೀವಭಾವದ ಸಿರಿಯೆ! ಇಂದಿರೆಯೆ! ಚಂದಿರೆಯೆ! ಸುಂದರಿಯೆ!
ಅರಳಲಿಲ್ಲೇ?

ಭಾವಭವನದ ಭವ್ಯದೀಪ ನೀನೇ! ನನ್ನಿ!
ಜೀವದೇವರ ಮದುವೆಗಂಟು ನೀನೇ! ನನ್ನಿ!
ಜೀವನದ ಜೇವಣಿಗೆ ಜೇನು ನೀನೇ! ನನ್ನಿ! ಅಣುಕಣದಿ
ಕುಣಿವ ಕಳೆಯೇ!

ದುಮ್ಮಾನವನ್ನಾಂತ ಮನವನ್ನು ಮನ್ನಿಸುತ
ಸುಮ್ಮಾನ ನೀಡುತ್ತ, ಸುಮ್ಮಾನೆ! ಸುಮನೋ-ಜ್ಞೆ!
ಒಮ್ಮೊಮ್ಮೆ ನುಡಿಯ ನಡೆಮಾಡವನ್ನೇರಿ ಬರುವಿಯೆ ಬಗೆಯ
ಬೈಲಿನಲ್ಲಿ!
ಇಮ್ಮೊರೆಯ ಗಾನವಿದು — ಮಸುಳದಿರು! ಮಸುಳದಿರು!
ಒಮ್ಮನದ ಧ್ಯಾನವಿದು — ನುಸುಳದಿರು! ನುಸುಳದಿರು!
ಅಮ್ಮಯ್ಯ! ನಾಡನುಡಿ-ಹುಡಿಯಲ್ಲಿ ಹಾಡುಗುಡಿ ಕಟ್ಟುವೆನೆ!
ನಿಲ್ಲು! ನಿಲ್ಲು!

ಒಡನುಡಿವೆ! ಒಡನುಡಿವೆ! — ಒಡಮೂಡು! ಒಡಮೂಡು!
ಒಡನುಡಿವೆ! ಒಡನುಡಿವೆ! — ನುಡಿಗೂಡಿನಲಿ ಹಾಡು!
ಒಡನುಡಿವೆ! ಒಡನುಡಿವೆ! — ನನ್ನಿನನ್ನಿಗಳೆರಡು ಕಣ್ಣುಗಳ
ತೆರೆದು ನೋಡು!
ಅಡಿಗಡಿಗೆ ಮನಮಿಡಿಯ ಹಣ್ಣಿಸೌ! ಬಣ್ಣಿಸೌ!
ನಡೆನಡೆಗೆ ಬಡಬಾಳ ಹಸುರಿಸೌ! ಕುಸುರಿಸೌ!
ಮಡಿನುಡಿಯ ನಡೆಮುಡಿಯ ಮೇಲೆ ನಡಿಗೆಯ ಜೆಡಗಿನಿಂದ
ನನ್ನವ್ವ! ನಡೆಯೌ!

೨೭-೭-೧೯೨೪

## —ಗೆ

(ಗೆಳೆಯನ ಹುಟ್ಟಿದ ದಿನದ ಹಬ್ಬದ ಉಡುಗೊರೆ)

ಇಂಗಡಲಮುಗಳ ಮೊಲೆಯಿಂಗುಟುಕನುಂಡಂಥ ತಿಂಗಳನೆ,
ಬಂತೆ ಭೀತಿ?
ಸಂಗಬಂದಿತೆ ರಾವು? ಮಾಂಗಲ್ಯಮಂತ್ರವನ್ನುವೆ ನೋಡು
—ಸ್ವಸ್ತಿ! ಸ್ವಸ್ತಿ!!

ಜಂಗಮು ಜಗದ್ರಂಗದೇವತೆಯ ಭಂಡಾರವನ್ನು ಭಾಲದಲಿ
ಬಳಿದು
ರಂಗಭೂಮಿಯ ಸೂತ್ರಧಾರನಾಗೈ ಬೇಗ ಬೀರಬಳೆಯನ್ನು
ತಳೆದು!

ಜಂಗುತಿನ್ನುವ ಜರೆಯ ಒರೆಯಲ್ಲಿ ಮರೆಯಾದ ಶರತ
ಹರೆಯನ್ನು ಹಿರಿಯೈ!
ಸಂಗರಾಗ್ರಣಿಯಾಗಿ ಸಿಂಗನಂದದಿ ನೀನು ಬೀರಸಿರಿಯಿಂದ
ಮೆರೆಯೈ!

ರಂಗುರಂಗಾಗಿ ಸಲೆ ರಂಗುಮುಹಲುಗಳಲ್ಲಿ ಹರಿವ ಹುಳಗಳನು
ನೋಡು!
ಸಿಂಗಾರ ಭಂಗಾರ ಭಂಗುರಗಳೆಂದೀಗ ಡಂಗುರವ ಹೊಯ್ದು
ಹಾಡು!

೩೦-೭-೧೯೨೩

## ೩೦

[ಜಡದ ಒಡಲಿನ ಒಡನುಡಿಯು 'ಏಂ' ಎಂದು ನುಡಿದೊಡನೆ, ಬಗೆಮುಗಿಲಿನ ಮಗಳಾದ ಮಾರ್ದನಿಯು 'ಆಂ' ಎಂದು ಪಡಿನುಡಿದಳು; ಒಡನೆಯೇ ಆನೂ 'ಏಂ' ಎಂದು ಕೇಳಿನೊಡನೆ, 'ಓಂ' ಎಂದು ಮಾರ್ನುಡಿಯು ಓ ಕೊಟ್ಟು, ಭಾವವನ್ನು ಒಡಂಬಡಿಸಿತು. ಆ ರಸನಿಮಿಷದ ಅಸ್ಫುಟಚಿತ್ರವಿದು.]

ಪ್ರಾಕೃತನು ನಾನಲ್ಲ; ಆಕೃತಿಯು ನನಗಿಲ್ಲ; ಜಂಗಮನು
ಅಲ್ಲ ನಾನು!
ಪ್ರಾಕೃತರ ಪ್ರೇಮಕ್ಕೆ ಪೌರುಷದ ನೀರ್ಕೊಡುವ ಸ್ಥಾವರ ಸ್ಥಾಣು
ನಾನು!

ನಸುಕೆ! ಮಸಕಿನ ಮುಸುಕು ಸರಿಸಿ, ಕನ್ನಿಕೆ! ಬಾರೆ
ನನ್ನೊಡನೆ ಬೆರೆಯಲಿಕ್ಕೆ!
ನಸುನಗುತ ಬಾ! ಬಂದ ನೀರನೇಸರನೀಗ
ಅದ್ವೈತವರಿಯಲಿಕ್ಕೆ!

ಚಿನ್ನೆ! ಹೊಲೆಹಾದರದ ಹಡದಿ ತುಳಿದಂಥ ಹದಿಬದೆಯೆ!
ಮಡಿಯೊಡೆಯೆ! ಮಡದಿ!
ನನ್ನಿನನ್ನಿಗಳೆಂಬ ಅವಳಿಜವಳಿಯ ಚಂದಕಂದರನು ನೀನು
ಪಡೆದಿ!

ಚೊಕ್ಕಟದ ಮಕ್ಕಳಿರ! ಜನುಮಜನುಮದ ನೆನಪಿನಿಂ
ನಿಮ್ಮ ಅಪ್ಪ, ಬಂದೆ!
ಎಕ್ಕಟಿಗನಿದ್ದರೂ, ಮಿಕ್ಕುವಕ್ಕರದುಕ್ಕಿನಿಂ
ನಿಮ್ಮ ಅಪ್ಪ ಬಂದೆ!

\+ \+ \+ \+

ಮೈಮರೆಯೆ, ಮನವರಿಯೆ, ಮಡಿಮಾತು ನೆರೆಯೆ, ಮಿಗೆ
ಮೆರೆಯೆ, ನನ್ನೊಡನೆ ಬೆರೆಯೆ
ಮೈ ಮನಸು ಮಾತುಗಳು ಸೊಬಗು ಸೂರಿದವಲ್ಲ—ಎದೆಮುಗುಳ
ಮಗಳ ಪಡೆಯೆ !

ನನ್ನಯೆದೆಮುಗುಳೆ ! ಕಿರುಮಗಳೆ! ಮುದ್ದಿನ ಮುದ್ದೆ !
ಮುತ್ತುಗಳ ಮುತ್ತೆ ! ಬಾ ! ಬಾ!
ಆನಂದನಂದಿನಿಯೆ ! ನಂದನದ ಚಂದೆ !
ಹೃದಯೇಂದೀವರೇಂದಿರೆಯೆ ! ಬಾ !

ನನ್ನ ಮುನ್ನವೆ ನೀನು! ನನ್ನ ಮನೆಮಗಳಾಗಿ,
ಮುನ್ನೀರ ಮಗಳೆ! ಬಂದೆ!
ನನ್ನ ನನ್ನಿಯು ನೀನು! ನನ್ನ ನನ್ನಿಯು ನೀನು!
ನನ್ನ ಮನದನ್ನೆಯಾದೆ!

ಇಂದು ನನ್ನಯ ಮನದ ಬಾಂದಳದಿ ಬಂದಂದೆ —‘ ಮರುಳೆ!
ಬಲು ಮರುಳೆ! ಇರುಳೆ!
‘ ಬಂದೆ ಅಂದದ ಪೂರ್ಣ ಪೂರ್ಣಿಮೆಯ ಚಂದ್ರಿಕೆಯು!
—ಕಣ್ಣುಕಣ್ಣಾಗಿ ಅರಳೆ! ’

+ + + +

ಮೇರುಗಿರಿಭಾರವದು ಮೇಲ್ಬಿದ್ದರೇಂ ? —ಇರುವೆಯಾದರೂ
ಇರುವೆ! ಇರುವೆ!
ಮೂರುಲೋಕದ ಸೃಷ್ಟಿ ಕಣ್ಗೆ ರಾಜಿಸೆ, ಅರಿಲು ಆದರೂ
ಅರಿವೆ! ಅರಿವೆ !

ಇರುಹು-ಅರುಹಿನ ನಡುವೆ, ಚೆಲುವು-ನಲಿವಿನ ನಡುವೆ
ಮರಹು ಅಂತರದ ಪಟ್ಟವು!
ಇರುಹು-ಅರುಹಿನ ಮದುವೆ, ಚೆಲುವು-ನಲಿವಿನ ಮದುವೆ-
ಯಾಗುತಿದೆ ದಿಟವು! ದಿಟವು!

ಅರುಹನರಳಿಸುವಂಥ ಕುರುಹು ಮೂಡುವ ತನಕ ನನ್ನಿಯನು
ನೋನ್ಪೆ! ನೋನ್ಪೆ!
ಮರೆವಂಥ ಕಣ್ಣುಗಳ ಕುರುಡ ಮಾಡುವೆನಹಹ! ನೈಪಿಡುವ
ಸೊಂಪೆ! ಸೊಂಪೆ!

\+ + + +

ಜೀವನಾಂಗಣದಲ್ಲಿ ರಾವಿಟ್ಟು ಕುಣಿವಂಥ ಜೀವನವ
ಬೆದರಿಸುವೆನು!
ಭಾವನೆಯ ಬೊಗರಿಯನು ತಿರ್ರೆಂದು ತಿರುಗಿಸುವ ತರಲ
ಬಾಲಕನು ನಾನು!

ಮೊದಲು ತುದಿಯಿಲ್ಲದಲೆ ಜಿನುಗಾಗಿ ಜಿನುಗುತಿಹ ತಿತ್ರಿಣದ
ತಾಲದಲ್ಲಿ
ತೊದಲು ನಾಲಿಗೆಯಿಂದ ತಿಲ್ಲಾನವನ್ನುಲಿವೆ ಲಾಲನೆಯ
ಲೀಲೆಯಲ್ಲಿ!

ನಶ್ವರರ ಬರಡಾದ ಬರಿದುಬರ್ದಿನ ಬಾಳ್ವೆ ಮೀರ್ದ
ಬರ್ದಿಲನು ನಾನು
ವಿಶ್ವವನ್ನರಿಯುವಂಥಂಥ ಸಾವನ್ನುಂಡ ಚಾವುಂಡದೇವ
ನಾನು!

ಕೂಡ್ಲಸಂಗಮನಲ್ಲಿ ಕೂಡಿ ಸಂಗಮವಾಗ ಬಂದ ಬಸವೇಶ
ನಾನು!
ಮೂಡ್ಲ ನೆಮ್ಮದಿಗಾಗಿ ವೈಯು ನಿರ್ಮಾಲ್ಯವನು ಬಿಡಬಂದ
ಯೇಸು ನಾನು!

ಮೂಜಗದ ಮುನ್ನಿದ್ದ ಮುನ್ನೀರ ಮಧ್ಯದಲಿ ಮೀಯುತಿಹ
ಮೀನ ನಾನು!
ಸೋಜಿಗದ ನಾಲ್ಕುಸಿರನೆತ್ತಿ ತಕ್ಕೈಸುತ್ತ ನಿಂತ ಚೈತನ್ಯ
ನಾನು!

೨೨–೮–೧೯೨೩

# ಓರ್ವ ದೇವಿ

“ಉರಿವ ಸೂರ್ಯನ ಕಣ್ಣು ಸಹ ಕುಕ್ಕಿಸುವ ಚನ್ನೆ
ನೀನಾರು ದುಂದುಗಾರ್ತಿ?
ಮೈಯ ನಿಂಬೆಯ ಬಣ್ಣವನ್ನು ಬೀರುವ ಹೆಣ್ಣು
ನೀನಾರು ಹೊಸಹುಗಾರ್ತಿ?
ಹೊಂಗೇದಿಗೆಯ ಸುಳಿಯ ಹಾಗೆ ಸುಳಿಯುತ ಬರುವ
ನೀನಾರು ಚೆಂದಗಾರ್ತಿ?
ಜಗಮುಕುಟದಲ್ಲಿ ಹೊಂಗರಿಯಂತೆ ನರ್ತಿಸುವ
ನೀನಾರು ಚೆಲ್ಲಗಾರ್ತಿ?

ಹೆಜ್ಜೆಹೆಜ್ಜೆಯ ಮುಂದೆ ಬಣ್ಣಬಣ್ಣಗಳಿಂದ್ರಚಾಪ
ಮೂಡಿಸುತ ಬರುವಿ!
ಹೆಜ್ಜೆಹೆಜ್ಜೆಯ ಹಿಂದೆ ಚಿಕ್ಕೆಚಿಕ್ಕೆಗಳನ್ನು
ಚೆಲ್ಲುಚೆಲ್ಲುತ್ತಲಿರುವಿ!
ಬಂದಬಂದಲ್ಲೆಲ್ಲ ಚಂದನದ ಚಂದವನು
ಸೂರೆಮಾಡುತ್ತ ತರುವಿ!
ನಿಂದನಿಂದಲ್ಲೆಲ್ಲ ನಂದನದ ನಂದನವ
ಧರಿಸುವದು ಸಕಲ ಪೊಡವಿ!

ನುಡಿನುಡಿಗೆ ಮುತ್ತುಗಳನುಗುಳುಗುಳಿ ಮುದ್ದು
ಮಂಟಪವನ್ನು ಮಾಡುತಿರುವಿ!
ನೋಟನೋಟಕೆ ಚಿನ್ನ ಮಿಂಚುಮಿಂಚಿನ
ಹೊನ್ನಿನಂಚನ್ನು ಹೆಣೆಯುತಿರುವಿ!

ಪುಟನಡಿಗೆಯಾಟಕ್ಕೆ ಚಕ್ಕಂದದೋಟಕ್ಕೆ
ಮಾಟ ಸೆಲೆ ಪುಟಿಸುತಿರುವಿ!
ಮುಗುಳುನಗೆಬಗೆಯನ್ನು ಮಿಗೆಯೊಗುತ ಜಗದಲ್ಲಿ
ಮುಗುಳುಗಳ ಚಿಗಿಸುತಿರುವಿ!"

‡ ‡ ‡

"ನಾಡಿನೊಡೆಯನ ಬೊಕ್ಕಸದ ಗುಟ್ಟು, ಪೊಡವಿಯೊಡಲಿನ
ಕಣಿಯ ಕರಣಿ ನಾನು!
ಚಿನ್ನರನ್ನದ ತಳಪು, ಹಾಲುಬೆಳ್ಳಿಯ ಹೊಳಪು,
ಮುತ್ತುಗಳ ನೀರು ನಾನು!
ಒಕ್ಕಲಿಗರಕ್ಕರದಿ ಹರಹರಸಿ ಬರುಬರುವ
ಮಳೆಬೆಳೆಯ ಭರವು ನಾನು!
ಸುಗ್ಗಿ ಹರವುವ ಹರೆಯ ಬಾಳು, ಹೂಗಳ ಹುರುಳು,
ಹಾಲ್ದೆನೆಯ ತಿರುಳು ನಾನು!

ನಲ್ಲರನು ನೋಡಿ ನೆರೆನಾಚಿ ನಿಲ್ಲುವ ನಲ್ಲೆಯರ
ಗಲ್ಲಕೆಂಪು ನಾನು!
ಮದದಾನೆಯೊಲು ನಡೆವ ಮಾನಿನಿಯ ಕೈಯುಗುರ
ಮದರಂಗಿ ಕೆಂಪು ನಾನು!
ತಾಯಿ ಸಲೆ ಚುಂಬಿಸುವ ಬಾಲಕನ
ಚಂಬವಳದುಟಿಯ ಕಡುಗೆಂಪು ನಾನು!
ಸಂಜೆ ಮುಂಜಾವಗಳ ಕೆಂಬಾರ ಹೊಂಬಣ್ಣಗಳ
ಶಾಂತಿ ಕಾಂತಿ ನಾನು!

ಎಳೆಹುಲ್ಲು ಹಚ್ಚನೆಯು, ಗಿಳಿಚುಂಚು ಕೆಚ್ಚನೆಯು,
ಕಣ್ಸೋಗೆ ಕಪ್ಪುಗೀಚು!
ಚಣಚಣಕೆ ಪಾರ್ವ ಪಾತರಗಿತ್ತಿ ಪಕ್ಕಗಳ
ಬಣ್ಣಬಣ್ಣಗಳ ಹುಚ್ಚು!
ಬಲುಚೊಕ್ಕ ಚಿಕ್ಕೆಗಳ ಚಿಕ್ಕಮಕ್ಕಳ ತಾಯ
—ಸ್ವರ್ಣದಿಯ ಬಸುರ ಕೆಚ್ಚು!
ಬಳ್ಳಿಬೆಳಕನು ಬೀರ್ವ ಕೋಲುಮಿಂಚಿನ ನಾಚು,
ನನ್ನ ಮಾನಸದ ಮೆಚ್ಚು!

ಎಲ್ಲ ಗ್ರಹಗಳ ಸೊಗಯಿಸುವ ಬೆಳಕು,
ವಿಶ್ವಚಿತ್ರವ ಬರೆವ ಬಣ್ಣ ನಾನು!
ಜಗದಿ ಜಿನುಗುವ ಜಿನುಗು ಬೆಳಕು-ಜಿನುಗನು ನೋಡಿ
ಬೆರಗಾದ ಕಣ್ಣು ನಾನು!
ಸಕಲ ವಿಶ್ವದ ರೂಪು—ನನ್ನಯುಜರಿವ ಮನುಜ
ಹಾಳಾದ ಬಾಳಿನವನು;
ನನ್ನಾಳು ಬಲು ಮರುಳು, ನನ್ನನಾಳುವ ಧೀರ ವೀರ
ನಿಜ ಜಾಣನವನು!"

ಆಗಸ್ಟ ೧೯೨೩

# ಒಲ್ಮೆನಹೊ! ನಲ್ಮೆನಹೊ!

[ಕೃತ್ರಿಮ ಚಿತ್ರವು ಕಾಲಾಂತರದಲ್ಲಿ ಅಳಿದರೂ, ಸ್ಮೃತಿಚಿತ್ರವು ಜನ್ಮಜನ್ಮಾಂತರಗಳಲ್ಲಿಯೂ ಉಳಿಯುವದು. ಮೃಣ್ಮಯ ಮೂರ್ತಿಯು ಕ್ಷಣಭಂಗುರವಾಗಿದ್ದರೂ 'ಚಿನ್ಮಯ' ಮೂರ್ತಿಯು ಕಾಲಾತೀತವಾಗಿ—ಅಚ್ಚು ಅಳಿಯದೆ—ನಿಲ್ಲುವದು. ಅಹುದು. ಅಂತೆಯೇ ಹೊರಗಣ್ಣಿಗೆ ಕಾಣದ ಕಣಿಗಳು ಒಳಗಣ್ಣಿನಿದಿರಿಗೆ ಹೊಸಹೊಸದಾಗಿಯೇ ಕಂಗೊಳಿಸುವವು; ಮನಂಗೊಳಿಸುವವು.

ನಾನು ಮೂರು ವರುಷದವನಿದ್ದಾಗ ನನ್ನ ತಾಯಿಯು ತೀರಿದ್ದರೂ, ಅವಳ ಮೋರೆಯಿನ್ನೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಚಿಕ್ಕಂದಿನ ಉಳಿದಾವ ನೆನಪುಗಳಿಗಿಂತಲೂ ಎರಡು ನೆನಪುಗಳೇ ನನ್ನ ಮೈ ಮರೆಯಿಸುವವು. ಒಂದು—(ನಾನಾಗ ಒಂದೆರಡು ವರುಷದವನಿರಬಹುದು!) ನನ್ನ ತಾಯಿಯ ಮೊಲೆಯುಂಡದ್ದು; ಇನ್ನೊಂದು—ಅವಳು ಸಾಯುವಾಗ ಬಾಯಲ್ಲಿ ನೀರು ಹಾಕಿದ್ದು. ಆ ಎರಡು ಪ್ರಸಂಗಗಳನ್ನೂ, ಅವುಗಳ ಸಂದರ್ಭಗಳನ್ನೂ, ನನ್ನ ಚಿತ್ತದ ಹೊತ್ತಿಗೆಯಲ್ಲಿ ಅಕ್ಷರವಾದ ಅಕ್ಷರಗಳಿಂದ ಕೆತ್ತಿದ ಕವಿಯು ಯಾರಿರಬಹುದು?

ನಾನು ನನ್ನ ತಾಯಿಯು ತೀರಿದಳೆಂದು ತಿಳಿಯುವದಿಲ್ಲ. ಮರ್ತ್ಯಜೀವನವನ್ನು ತೀರಿಸಿಕೊಂಡು, ಅಮರಳಾಗಿ, ಅಕ್ಷಯ್ಯವಾದ ದಿವ್ಯದೇಹದಿಂದ ನನ್ನನ್ನು ರಕ್ಷಿಸುವಳೆಂದೇ ನನ್ನ ನಚ್ಚಿಕೆ. ಇದೀಗ ನಿಜವಾದ ಕಾವ್ಯ! ಕಂಡೂ ಕಾಣದವರಿಗಿಂತ ಕಾಣದೆಯೂ ಕಾಣುವವರೇ ಅಲ್ಲವೆ ನಿಜವಾದ ಜೀವಿಗಳು?]

ಒಳ್ನಗೆಯ ಒಳ್ನಿಲೆಯೊ! ಬೆಳ್ದಿಂಗಳಿನ ಮೊಲೆಯೊ!
ನನ್ನಿ ನನ್ನಿಯ ಕೊನೆಯೊ! ಇನಿಕನಿಯ ತನಿಮನೆಯೊ!
ಒಲ್ಮೆನಹೊ! ನಲ್ಮೆನಹೊ! ಮಣ್ಣೆಂಬ ಮನದಲ್ಲಿ, ಮಾತೆ!
ನೀನಿಟ್ಟ ಕುರುಹೋ!

ಮೂರನೆಯ ವರುಷದಲಿ ನೀನುಣ್ಣಿಸಿದ ಗುಟುಕು
ನೂರು ವರುಷದ ತನಕ ನನ್ನ ಕಾವ್ಯದ ಸ್ಫೂರ್ತಿ,
ನೂರು ಸಾಸಿರ ವರುಷ ನನ್ನ ಕಾವ್ಯದ ಕೀರ್ತಿಯಾಗಲೌ
ದೇವಭಾವೇ!

ಚಿಕ್ಕಂದಿನಲ್ಲಿ ನನ್ನಯ ಗಲ್ಲವನು ತೀಡಿ
ಅಕ್ಕರತೆಯಿಂದ ಮುದ್ದಾಡಿದಂಗೈ ನನ್ನ
ಏಕಚಕ್ರಾಧಿಪತ್ಯದ ನಿತ್ಯ ಕಾಯಲೌ ಶ್ವೇತಾತಪತ್ರವಾಗಿ!

ನನ್ನಣುಗಿನಣುಗನನು ಸಲಹುವವರಾರೆಂದು
ಮಣ್ಣ ಮೈಮನೆ ಬಿಟ್ಟು ದಿವ್ಯ ದೇಹವ ತೊಟ್ಟು
ಕಣ್ಣಿಗೆವೆಯಂದದಿಂ ಕಾಯುವಂ ಕಾಣದೊಲು ಕಾಯುವಿಯೆ
ಕವಚವಾಗಿ!

ಎಲ್ಲ ಚಲ್ಲದಿ ನನ್ನ ನಯನಕಮಲದ್ವಯದಿ
ನಿಲ್ಲಮ್ಮ, ಸೊಗಯಿಸುವ ಸಿರಿ-ಸರಸ್ವತಿಯಾಗಿ!
ಎಲ್ಲಮ್ಮ! ಎಲ್ಲ ಸೃಷ್ಟಿಯ ಚಲ್ಲಿಯಲಿ ನೋಳ್ಪೆ ಶತಕೋಟಿ
ಬಿಂಬಗಳನು!

ಆಯೆ! ಆs! ಆs! ಯೆನಲು ದಿವ್ಯ ಆವಾಗಿ ಬಾ!
ತಾಯೆ! ತಾs! ತಾs! ಯೆನಲು ಮುದ್ದು ಮುದ್ದಾಗಿ ಬಾ!
ಮಾಯೆ! ಮಾs! ಮಾs! ಯೆನಲು ಮಾಮಾಯೆಯಾಗಿ ಬಾ!
ಇಮ್ಮೊಲೆಯ ಚಿಮ್ಮಿಸುತ್ತ!!

ಚೆಲುವು-ನಲಿವುಗಳೆಂಬ ನಿನ್ನ ಮೊಲೆಗೊಡಗಳಂ
ಒಲವೆಂಬ ಸೀಹಾಲ ಸೆಲೆ ಪುಟಿಸೆ!—ಸಲೆ ಚೀಪಿ
ಸೆಲವುಗಿಲು ಲಲ್ಲೆಗೆಯ್ವಂತೆ ಗಾನವನುಲಿವೆ—
ಲಾಲಿಲಾss ಲಾಲಿಲಾsಲಾsss!

೨೪-೯-೧೯೨೨

# ವಸಂತನಿಗೆ

[ಕನಸಿನಲ್ಲಿ ಅಂದಂತಾದ ಸಾಲುಗಳನ್ನು ಒಟ್ಟುಗೂಡಿಸಿ ಬರೆದಿದೆ. ಸುಪ್ತಿಯು ಶಂಭುವಿನ ಸುತ್ತ ಸ್ಮೃತಿಯ ಭೂತಗಣ! ಕನಸಿನಲ್ಲಿ ಅಂದ ನುಡಿಗಳೆಲ್ಲ ನೆನಪಿರುತ್ತಿದ್ದರೆ, ಅದೊಂದು ದೊಡ್ಡ ಕಾವ್ಯವೇ ಆಗುತ್ತಿತ್ತು. ಆ ಜಾಡ್ಯದಲ್ಲಿ ಸ್ಮೃತಿಯೊಂದು ಜಾಗೃತವಾದರೆ— !]

ಕಡೆಯ ಸುಗ್ಗಿಯ ಭರದ, ಕಡೆಯ ಮಾವಿನ ರಸದ
ಕಡೆಯ ಗುಟುಕನು ಕುಡಿದು, ಕಡೆಯ ಸವಿಯನು ಸವಿದು,
ಕಡೆಯ ಹಾಡನು ಹಾಡಿ, ಕಡೆಯ ನೋಟವ ನೋಡಿ.
ಹೋಗುವೆನು ಕೂಗಿ ಕೂಗಿ!

ಕಡೆಯ ಹಾಡನು ಹಾಡಬಂದೊಡನೆ, ಕೊರಳುಬ್ಬಿ.
ಒಡೆದು ಕಂಠವು ಕುಗ್ಗಿ, ನಡುವೆಯೇ ಮುಗ್ಗಿತ್ತೈ!
ಕಡೆಯ ನೋಟವ ನೋಡಬಂದೊಡನೆ ತುಂಬಿದವು ಕಣ್ಣುಗಳು,
ಕಂಗಳರಸಾ !

# ನೂತನ ಬ್ರಹ್ಮ

[ ಕಟ್ಟಿದ ತಾಳವನ್ನೇ ಕುಟ್ಟುತ್ತ ಕೂಡುವ ನರಹರ ನೆರಳನ್ನೆ ಹಿಂತು ಹಿಂತು ಸುವಸ್ಥಾನಗೊಂಡ ಸ್ವಭಾವವು 'Byron' ನು ಬರೆದ 'Ocean (ಸಾಗರ)' ನೆಂಬ ಗೀತೆಯನ್ನೋದಿ, ಸ್ವಪ್ನಗೊಂಡು, ಕೆಳಗಿನ ನುಡಿಗಳನ್ನು ತಾನೇ ಹಾಡಿತು.]

ಹಾಡಿದೊಡೆ ನಾಡು ಸೋಡೀತು !
ನುಡಿಯ ! - ನಾಡಿದೊಡೆ ಗುಡುಗು ನಡುಗೀತು !

ಉಸುರಿದೊಡೆ ನಸುಕು ಹರಿದೀತು !
ರಸನೆ ! - ಯೊಸಗಿದೊಡೆ ಸುಧೆಯು ಸಹಿದೀತು !

ತಿದ್ದಿದೊಡೆ ವಿಶ್ವವೆದ್ದೀತು !
ಬೆರಳ ! - ಸೆದ್ದಿದೊಡೆ ನರಕ ಬೆಳಗೀತು !

ಕೋರಿದೊಡೆ ಕಲ್ಲು ಕೊನರೀತು !
ಮನದ ! ಹೊರಿದೊಡೆ ಧರೆಯು ತೀರೀತು !

ಮುಚ್ಚಿದೊಡೆ ಮಣ್ಣು ಹಣ್ಣೀತು !
ಪಿಚ್ಚ ! ನೆಚ್ಚಿದೊಡೆ ಗುಟ್ಟು ಬಿಚ್ಚೀತು !

# ಅಹಹ ಅಪೌರುಷೇಯವೇ!

ಸಿಡುಸಿಡಿಲ್ ಸಿಡಿಲೆಂದು ಸಿಡಿಲನ್ನು ನುಡಿಯುತಿಹ
ಭವಿತವ್ಯತೆಯ ವಾಣಿ! ಶರಣು! ಶರಣು!!
ಗಡಚಿಕ್ಕಿದರು ಕಿವಿಯು, ಕೇಳುವೆನು ಕಲಿಯಾಗಿ!
ಬಗೆಮುಗಿಲು ಮುಗಿಯಲೌ ಶರಣು! ಶರಣು!!

ಕಲ್ಲಾದ ನನ್ನೆದೆಯೊಳೊಡಮೂಡ ಬಂದಿರುವ
ವಿಶ್ವಸ್ವರೂಪವೇ! ನಿನ್ನ ಕಂಡು
ಮೆಲ್ಲನರಳಿಯೆ ಮನದ ನಯನವು ನಿಲಿಂಪಾಯ್ತು
ಚಲುವೆ! ನಲಿವೇ!—ನಿನ್ನ ಸೊಗವನುಂಡು!

ನನ್ನ ಹರಣದ ಮಣೆಯ ಮೇಲೆ ವೀರಾಸನದಿ
ಕುಳಿತಿರುವ ವೀರಮಣಿ! ಸುವ್ವಿ! ಸುವ್ವಿ!!
ನಿನ್ನಾಣೆ! ದೇಹವನು ಮಾಡಿ ಹಡಲಿಗೆಯನ್ನು
ನೀಡುವೆನು ಜೀವವನು! ಸುವ್ವಿ! ಸುವ್ವಿ!!

'ಜೀವ ಹೂವಾಯ್ತಿಂದು ನಿನ್ನ ಪಾದಕ್ಕೆಂ'ದು
ಒಡನುಡಿಯ ಪಡಿನುಡಿದು ಮುಡಿಯ ಮನದಿ
ಸಾವೆಂಬ ಹಾವನ್ನು ಹಿಡಿದು ಎಡಗೈಯಲ್ಲಿ
ಊದುವೆನು ಪುಂಗಿಯನು ಮೋಡಿತನದಿ!

ಹರಿದೆನೀ ಪರೆಯನ್ನು! ತೊರೆದೆನೀ ಜರೆಯನ್ನು!
ಕಡಿದೆನೀ ತಡಿಯನ್ನು! ನನ್ನಿ! ನನ್ನಿ!!
ಮರೆವನ್ನು ಮೆಟ್ಟಿಹೆನು! ಅರಿವನ್ನು ತೊಟ್ಟಿಹೆನು!
ಆದೆ ಜಂಗಮನೀಗ! ನನ್ನಿ! ನನ್ನಿ!!

ಬೆಚ್ಚಿಬೆದರಿದ ಬುದ್ಧಿಗಿಂದು ಕಡಿವಾಣವನು
ಬಿಗಿದೇರಿ, ನಿನ್ನ ತನಿಹರಕೆಯಿಂದ
ವಾಚಾಮಗೋಚರವೆ! ಜೀವಕುವರನು ಬಂದ!
-ನೀಡು ನಳಿದೋಳ್ಗಳನು ನನ್ನಿಯಿಂದ!

# ಹಾಲಕ್ಕಿ

ರಂಗುಮಹಲಿನ ರಾಗ, ರಂಗುದುಟಿಗಳ ರಾಗ,
ಇಂಗೊರಲು ಉಲಿವ ರಾಗ,
ಶೃಂಗಾರಸೂತ್ರಜ್ಞೆ ಕೋಕಿಲೆಯ ಕುಕಿಲು ಸಹ
ಕಡುಬೇಸರಾಯಿತೀಗ!

ಅಡ್ಡಹಾದಿಯ ಹಿಡಿವೆ! ಸಾವಿನಾಚೆಯ ನಾಡ
ಗೂಢವಿಂದೊಡೆಯುತಿಹುದು!
ಗುಡ್ಡಗಾಡಿನ ನಡುವೆ ಕಳಕುಳಗಿಳಿಂದು
ಹಾಲಕ್ಕಿಯೊಡನುಡಿಯುತಿಹುದು!

ಜೀರಿಡುವ ಹಾಲಕ್ಕಿ! ದೇವಲೋಕದ ಗುಟ್ಟುಬಟ್ಟೆಯನು
ನೀನೆ ಬಲ್ಲೆ!
ಕಾರಿರುಳ ದೇವತೆಯು ಕಿವಿಯಲ್ಲಿ ಹೇಳಿದಳು ಇರಿಸಿ
ಮುಂಗೈಯ ಮೇಲೆ!

ಈಚೆ ಮುಳುಗುವ ಭಾನು ಆಚೆ ಮೂಡುವನೆಂದು
ಚೀರುತಿಹೆ ಬೇರೆ ಸ್ವರದಿ!
ಊಚನೀಚವ ಮಾಸ ನಿನ್ನದೌ ಕನಸರಸಿ! ಸಾಗುವೆನು
ನಾನು ತ್ವರದಿ!

ನನ್ನ ದೈವದ ದೈವತವೆ! ನಿನ್ನ ಮನೆಯಲ್ಲಿ
ಪರದ ಸಂಸಾರಿಯಾಗಿ
ಇನ್ನು ಬಾಳುವೆನಮ್ಮ—ನಿನ್ನ ಒಳ್ಗುಡಿಯಲ್ಲಿ
ಇಹದ ಸಂನ್ಯಾಸಿಯಾಗಿ!

ಅಕ್ಕ ಶಕುನದ ಹಕ್ಕಿ! ನಿನ್ನ ಭಕ್ತನು ಅಂಗಲಾಚುವನು
ಮುಂದೆ ನಿಂದು
ಕಕ್ಕುಲಾತಿಯ ತೋರಿ ಹರಿಸವ್ವ—ಜಗದಲ್ಲಿ ಹಗಲು
ಇರುಳಾಗಲೆಂದು!

## ಶ್ರೀಮದಾನಂದತೀರ್ಥ !

[ರಕ್ತಾಕ್ಷಿ ಸಂವತ್ಸರದ ಅಕ್ಷತ್ತದಿಗೆಯು ಸಂಘಸಾಧನದ ನಿಮಿತ್ತವಾಗಿ ಬರೆದುದು]

ಶ್ರೀಮದಾನಂದತೀರ್ಥನೆ ! ಶರಣು ! ಶರಣು !!
ಶ್ರೀ—ಮದಾನಂದತೀರ್ಥನೆ ! ಶರಣು ! ಶರಣು !!

ಆನಂದತೀರ್ಥದಲಿ ನಾನಬಂದಿಹೆನು
ಸಾನಂದಸುಂದರನ ಕಾಣಬಂದಿಹೆನು !

ಆನಂದತೀರ್ಥ! ನೀನೆನ್ನ ತೀರ್ಥ !
ತನ್ನ ಮೈಮನ ತೊಳೆಯ ಬಂದನಾರ್ತ !

ಶ್ರೀಮದಾನಂದಸಾಗರನ ತನಯ
ಶ್ರೀಮದಾಸ್ಯವ ತೋರ್ಪನೇನೊ ಜೀಯ ?

* * * *

ಆಡಿ ಬೇಡುವೆ ನಾನು ನಕ್ಕು ಕೆಲೆದು !
ಕಾಡಿ ಬೇಡುವೆ ನಾನು ಅತ್ತು ಕರೆದು !

ಭಕುತಿಯೆಂಬುವದು ದಿಟ ! ತಾಯ ತೊಡೆಯು !
ಸಕಲಲೋಕೈಕಚಕ್ರೇಶ್ವರನ ಕೊಡೆಯು !

ದೇವದತ್ತಾತ್ರೇಯನುಂಡ ಹಾಲಿಹುದು !
ಜೀವದೇವರ ತುಟಿಗಳೊಡಗೂಟವಿಹುದು !

ವಾಲ್ಮೀಕಿಕೋಕಿಲದ ನಾಲಗೆಯ ನಲ್ಲೆ !
ನಲ್ಮೆ-ಒಲ್ಮೆಗಳ ಸಂಗಮವು ನೀನಲ್ಲೆ ?

ನವರಸಂಗಳ ನಾಟ್ಯ ನಿನ್ನ ಸುತ್ತಿಹುದು !
ಕವಿಹೃದಯ ರಾಸ ಸಮ್ರಾಜ್ಞಿ ನೀನಹುದು !

ಭಾವಗೀತೆಯ ಸುಡಿವ ಭಾವಕವಿಯ
ಭಾವದೇವಾಯತನವಧಿದೇವಿಯೇ !

ಭಾವಗೀತೆಯ ನ್ನಾಳ್ಪಿ ದೇವಗೀತೆ !
ಭಾವಾಂಬುಜಾತಗರ್ಭಾಭಿಜಾತೆ !

*　　　*　　　*　　　*

ಮೇಲೆ ನೋಡಲು ಮುಗಿಯದಂಥ ಮುಗಿಲು !
ಎಲ್ಲಿ ನೋಡಿದರಲ್ಲಿ ಪಾಲ್ಗಡಲ ಪಾಲು !

ಆಲದೆಲೆಯೊಂದಲ್ಲಿ ಚಲ್ಲದಿಂದಲೆದು
ಲೀಲೆಯಿಂದುಲಿವ ಕವಿಹೃದಯದಂತಿಹುದು !

ಆ ವನಧಿಮಧ್ಯದುಯ್ಯಾಲೆಯಲ್ಲಿ
ಆವ ನಲ್ಗೂಸು ಮುದ್ದಾಡುತಿಹುದಲ್ಲಿ ?

ತನ್ನ ಕಾಲುಂಗುಟವ ತಾನೆ ಚೀಪುವದು !
ಸ್ವಾನಂದ ಲೀಲಾ ವಿಲೋಲವಿಹುದು !

ಅಮೃತಕಲಶದ ಪಾಂಗು ಆ ಉಂಗುಟದಲಿ !
ಅಮರದುರ್ಲಭಭಕ್ತಿ ! ನೀನಿರುವೆಯಲ್ಲಿ !

ಆಡಿ ಬೇಡಿವೆ ನಾನು ನಕ್ಕು ಕೆಲೆದು !
ಕಾಡಿ ಬೇಡುವೆ ನಾನು ಅತ್ತು ಕರೆದು !

ಶ್ರೀಮಧ್ವ ! ಮಧುರಮಾಧವನ ಭಕ್ತ !
ಆ ಮಧುವ ನೀಡು ಆನಂದತೀರ್ಥ !

*　　　*　　　*　　　*

ಬೇಡಯ್ಯ ಬುದ್ಧಿಯಾ ಶ್ರದ್ಧೆ ಬೇಡ !
ಬೇಡಯ್ಯ ಹೃದಯದಾ ಭಾವ ಬೇಡ !

ಛಾಯೋಪಜೀವಿತ್ವ ಬೇಡ! ಬೇಡಯ್ಯ !
ಜೀವೋಪಜೀವಿತ್ವ ನೀಡು! ನೀಡಯ್ಯ !

ಭಕ್ತಿಯದು ಭಾವಶ್ರದ್ಧೆಗಳ ತಾಯಿ !
ಭಕ್ತಿಯದು ವಿಶ್ವರೂಪವ ತೋರ್ವ ಬಾಯಿ !

ಭಕ್ತಿಯದು ಮುಕ್ತಿಸೋಪಾನವಲ್ಲ !
ಮುಕ್ತಿಯೇ ಭಕ್ತಿಸೋಪಾನವಿಹುದಲ್ಲ !

ಭಕ್ತಿಯೊರಗಿಹಳು ವತ್ಸಾಂಕವಕ್ಷದಲಿ !
ಭಕ್ತಿಯಿಲ್ಲದ ಮುಕ್ತಿಯೆಲ್ಲಿ ? ಎಲ್ಲಿ ?

ಭಕ್ತಿಯಿದ್ದರೆ ಭುಕ್ತಿಯೊಳು ಮುಕ್ತಿಯಿಹುದು !
ಭಕ್ತಿಯಿದ್ದರೆ ಭುಕ್ತಿಯೊಳು ಶಕ್ತಿಯಿಹುದು !

ಶ್ರೀಮಧ್ವ! ಮಧುರಮಾಧವನ ಭಕ್ತ !
ಆ ಮಧುರ ಭಕ್ತಿ ಕೊಡು ಆನಂದತೀರ್ಥ !

*　　*　　*　　*

ಈರೇಳು ಭುವನಗಳ ಮುಖ್ಯಪ್ರಾಣ !
ಹರಣಕರಣಗಳ ಅರಳಿಟ್ಟ ಜಾಣ !

ವೇದಗಳನುಸುರಿರುವ ಉಸುರೆ ! ಸುಪ್ತಿ !
ಮಾಧವನ ಮಧುವೇಣುವನ್ನು ಊದಿರುವಿ !

ಉಬ್ಬುಗಲ್ಲದಿ ಶಂಖವೂದುವಂತೆ
ಆಬ್ಬರದಿ ನಭವನೂದುತ್ತ ನಿಂತೆ !

ನೀನು ಪುರುಷೋತ್ತಮನ ಪೌರುಷದ ನೀರು !
ನಾನು ಪ್ರಾಕೃತನಯ್ಯ ! ದೇವ ! ಅವಧಾರು !

ಪೂರ್ಣಿಮೆಯ ಪೂರ್ಣನೊಲು ಪೂರ್ಣವಾಗಿ
ಪೂರ್ಣಪ್ರಜ್ಞನೆ ! ನನ್ನ ಪ್ರಜ್ಞೆ ಗೆಲ್ಗೆ !

ನನ್ನಿ ನನ್ನಿಗಳ ಸಂಸಾರ ಸಾಗಿ
ಇನ್ನಿರ್ದ ಮಾಗಿಯದು ಸುಗ್ಗಿಯಾಗಿ
ಆನಂದವಾಳ್ವುದಕ್ಷಯ್ಯವಾಗಿ
ಕಾಣುವೆನೆ ಚಿಕ್ಕೆಗಳ ಅಕ್ಕನಾಗಿ ?

ಮಾಣಿಸೈ ವೈಮನದ ಮೋಡಿಯನ್ನು !
ಕಾಣಿಸೈ ಜಗವೊಗುವ ಗಾಡಿಯನ್ನು !

ಓಡಿಸೈ ಭೂತವೆನ್ನುವ ಭೂತವನ್ನು !
ಮಾಡಯ್ಯ ಭವ್ಯವನು ಭವ್ಯವನ್ನು !

* * * *

ಶ್ರೀಮದಾನಂದತೀರ್ಥನೆ ! ಶರಣು ! ಶರಣು !
ಶ್ರೀ–ಮದಾನಂದತೀರ್ಥನೆ ! ಶರಣು ! ಶರಣು !

**॥ ಶ್ರೀಮದಾನಂದತೀರ್ಥಾರ್ಪಣಮಸ್ತು ॥**

೯-೫-೧೯೨೪

# ಭಾವದೇವಿ

**'Emotion re-collected in tranquillity'**

–Wordsworth

ಹೊಮ್ಮುತಿಹ ನಿನ್ನ ಕಂಬನಿ ಕಂಡು ಅನಿಸಿತೌ
ರೋಮರೋಮದಿ ನೇತ್ರವರಳುವಂತೆ !
ಬಿರಿದು ಬಿರ್ರನೆ ಹೃದಯ ಧರಿಸಬೇಕೆಂದಿತೌ
ತೆರೆದು ಬಾಯ್ಬಿಡುತಿರುವ ಸಿಂಪಿನಂತೆ !

ಮನ್ಮಥನ ಮಾನಸವನು ತೂಗುತಿಹ ತುಲೆಯೆಂದು
ಹೆಣ್ಣ ಕಣ್ಗಳನು ತಿಳಿದಂಥ ನಾನು
ಸೌಂದರ್ಯಲೋಕಕ್ಕೆ ದಿವ್ಯದ್ವಾರಗಳೆಂಬ
ಎಂದು ಕಾಣದ ಕಣಿಯ ನಡೆಕಂಡೆನು !

ಆ ಮಧುರ ಭಾವಲೋಕವ ಹೊಕ್ಕು ನೋಡಿದೆನು
ರಾಮಣೀಯಕ ರೂಪ ರಾಶಿಯನ್ನು !
(—ಅರರೆ ! ನೇಸರನಿಲ್ಲದಾರನರಸುತ್ತಿಹನೊ !— )
ಇರುಳುವೆಣ್ಣಿನ ರಾಣಿವಾಸವನ್ನು !

ಅಕ್ಷಯ್ಯವಾಗಿರ್ಪ ನೂತ್ನ ನಕ್ಷತ್ರಗಳ
ಲಕ್ಷ ನಂದಾದೀಪಗಳನು ಇಟ್ಟು,
ಅಕ್ಷೀಣಶಾಂತಿಯಿಂ ಕಲ್ಪಕಲ್ಪಗಳಿಂದ
ಲಕ್ಷ್ಮಿ ಕಾದಿಹಳಲ್ಲಿ ನೋನ್ಪಿ ತೊಟ್ಟು !

ಆ ಮೌನದಲ್ಲಿಹುದು ಮುನಿಯ ಮೌನದ ಮಟ್ಟು,
ಮಾಮಾಯೆ ಮಾಡುತಿಹ ಕಣ್ಣುಕಟ್ಟು !
ಭೂತಮಾತ್ರಗಳನ್ನು ಉದ್ಧರಿಸಲವತರಿಪ
ಪ್ರೀತಿಮಂದಾಕಿನಿಯ ತೊರೆಯ ಹುಟ್ಟು !

‘ ಹರಳಿಗಿಂತಲು ಬಿರುಸು ಹೂವಿಗಿಂತಲು ಸರಸು ’
ಕರುಳು ನಿನ್ನದು, ಕಲ್ಪತರುಕಲಿಕೆಯೇ !
ಎಂಟೆದೆಯ ಬಂಟತನ, ಮೆಲ್ಲೆದೆಯ ನಲ್ಲತನ
ಉಂಟು ನಿನಗುಂಟಿನ್ನ ಚಂಗಳಿಕೆಯೇ !

ಸತ್ಯಸತ್ರದಿ ಜೀವಸರ್ವಸ್ವವನು ತೊರೆದಿ !
—ನಿತ್ಯವಿದು ನನ್ನ ಮಾನಸದ ನೆಚ್ಚು :
ದಕ್ಷಯಾಗಾಗ್ನಿಯೊಳು ಪ್ರೈಯ ಮುಡುಪನ್ನೊಗೆದ
ದಕ್ಷಸುತೆ–ಸತಿಗಿಂತ ನೀನೆ ಹೆಚ್ಚು !

* * * *

ವತ್ಸ–ರಾಮನ ಜೀವಜೀವಾಳವಾಗಿರುವ
ವತ್ಸಲೆಯೆ! ವಾತ್ಸಲ್ಯಜ್ಯೋತ್ಸ್ನೆಯಿಂದ
ಮುತ್ತು ಮುತ್ತಿನ್ನ–ಮುತ್ತನು ನೀರು ಮುತ್ತುವೊಲು,
ಮತ್ತೆ ಮುತ್ತಿಡು ಇಮ್ಮುದುಟಿಗಳಿಂದ !!

ಬಾನ ಬಟ್ಟಲವಿಂದು ಜೇನ ಬಟ್ಟಲವಾಯ್ತು !
ನಾನು ಕುಡಿಯುಲು ಅದುವೆ ಚೆಲ್ಲಿತಲ್ಲ !
ನನ್ನ ಅನಿಸಿಕೆಯಾಯ್ತು–ಮನದ ಬನಶಂಕರಿಯೆ !
ನನ್ನಿ–ಜೇನಿನ ಹುಟ್ಟು ನೀನೆಯಲ್ಲ !

ದುಗ್ಧಧವಲಾಂತರಂಗೆಯೆ ! ಕರುಳ ಕುವರನನು
ಮುಗ್ಧ ಸ್ನಿಗ್ಧ ಸ್ನೇಹದಿಂದ ಪೊಸಿ,
ನಿನ್ನೆರಕದಲ್ಲೆರೆದು, ‘ ಯುಗಯುಗಗಳನ್ನುಳಿದು
ಚಿನ್ನ ! ಉಳಿ ! ’ ಯೆಂದು ಹರಕೆಯನು ಸೂಸಿ,

‘ ಮೂಲೋಕಗಳ ಸೃಷ್ಟಿ ಮಾಲಿಸುತ್ತಿಹುದಲ್ಲ !
ಎಲ್ಲಿ ಜನದೃಷ್ಟಿ ತಟ್ಟುವದೊ ! ’ ಎಂದು,
ಗಲ್ಲದಲ್ಲೊಪ್ಪುವೊಲು ಕಪ್ಪುಚಿಕ್ಕೆಯ ಹಚ್ಚು
ನೀಲಗಗನದಿ ಬಾಲನಾಡಲೆಂದು !

* * * *

ನೀನು ನನ್ನನು ಪಡೆದೆ! ನಾನು ನಿನ್ನನು ಪಡೆವೆ!
ನನ್ನ ಪ್ರೇಮದ ದಿವ್ಯಧಾಮವಾಗು!
ಭಾವದೇವಿಯೆ! ನನ್ನ ಜೀವವನು ದೀಪಿಸಿದೆ!
ಜೀವಜ್ಯೋತಿಗೆ ನೀನೆ ಸೆರಗು ಆಗು!

ನಿನ್ನ ಕರುಳಿನ ತಿರುಳು ಮೈದಾಳಿ ನಾನಾದೆ!
ನನ್ನ ತಿರುಳಿನ ಕರುಳು ನೀನೆಯಾಗು!
ನಿನ್ನ ಭಾವವೆ ಜೀವಗೊಂಡು ನಾನಾಗಿಹೆನು!
ನನ್ನ ಜೀವದ ಭಾವ ನೀನೆಯಾಗು!

ನನ್ನ ಹಾಡಿನ ತೊರೆಯು, ಎದೆಯ ನಾಡಿನ ದೊರೆಯು
ನೀನಾಗು ಬಗೆಯ ಬೊಕ್ಕಸದ ಸಿರಿಯು!
ವಿಶ್ವಮಾತೆಯ ಮೊರೆಯ ಕರೆಗೆ ಧಾವಿಸಿ ಬರುವ
ಈಶ್ವರರ ಮುಂಗೈಯ ಬೀರಸಿರಿಯು!

ಜೀವದಾವರೆಯುರಳಿ ಸೌಗಂಧ್ಯವೆಣ್ದೆಸೆಯು-
ನಾವರಿಸಿ, ಮುಗಿಲು ಮುಗಿವಂತೆ ಸೂಸಿ,
ದೇವಭಾವವು ಮೂಡೆ, ನಾದದೇವನು ಪಾಡೆ,
ಭಾವತೀರ್ಥವನೀಜು ರಾಜಹಂಸಿ!

ಕಿವಿಯ ಕವಿಯಾಗಿರುವ ಹಾಲಕ್ಕಿ ನೀನಿರಲು,
ಭವವೆಲ್ಲ ಜೀವಕ್ಕೆ ಭವ್ಯವಾಗೆ,
ಚಿಕ್ಕೆಗಳ ತಾಲದೊಳು ಚಕ್ಕಂದವಾಡುವೆನು
ಮುಕ್ಕಣ್ಣ–ಬಾಲನಟರಾಜನಾಗಿ!

* * * *

ಭಾವನಿಮಿಷಗಳಲ್ಲಿ ಮಿಂಚಿ ಮಿನುಗುವ ನಿನ್ನ
ಭಾವಮೂರ್ತಿಯೆ ಜೀವಮೂರ್ತಿಯಾಗಿ
ನನ್ನ ಕಣ್ಣಾಲಿಯೊಳಹೊರಗು ಕುಣಿಕುಣಿಯಲೌ
ಜನ್ಮ ಜನ್ಮದ ಜೀವಧಾತ್ರಿಯಾಗಿ!

ನೆಲಮುಗಿಲುಗಳ ಕೆಳೆದು, ಬೆಳೆಬೆಳೆದು, ಉಳಿದುಳಿದ
ಕೆಳದಿಯನು ನಿನ್ನಲ್ಲಿ ಕಂಡೆ ನಾನು !
ಇರುಳುಹಗಲುಗಳೆಂಬ ಕನ್ನು ಚೆನ್ನೈದಿಲೆಗ–
ಳರಳಿಸುವ ಕಮನೀಯ ಕಮಲೆಯನ್ನು !

ಆ ವಿಶ್ವರೂಪವನೆ ನನ್ನಿದಿರು ಧರಿಸವ್ವ
ಆವಗಂ ಮಮ ಮುಗ್ಧಮಾತೆಯಾಗಿ !
ಕಾಲ್ದುದಿಯ ಮೇಲ್ನಿಂತು, ಮೇಲ್ದಿಟ್ಟಿಯನ್ನೀವೆ
ನಲ್ದಾಯಿ ! ಚಿರಜೀವಿ ಬಾಲನಾಗಿ !

ಯಾ ನಿನ್ನ ಸಂಗಲಾವಣ್ಯ ಹೃದ್ರಂಗದೊಳು
ತನ್ನ ಸಿಂಗಾರದಿಂದವತರಿಸಿತೌ,
ಆ ನವ್ಯಭವ್ಯವಹ ರಮ್ಯವಹ ರೂಪೆನ್ನ
ಕಣ್ಣ ಕನ್ನೈದಿಲೆಗೆ ಹುಣ್ಣಿಮಿರಲೌ !

* * * *

ಶಾರದಾಕಾಶದೊಳು ಸುಭಗ ಸೌಭಾಗ್ಯವತಿ
ಶಾರದೆಯೆ ಮೇಘರಾಘವನುಲಿದಳು !
ಮನ್ಮನಮಯೂರವದು ನಲ್ಸೊಗದಿ ನರ್ತಿಸಿತು
ತನ್ಮಯತೆ ತನ್ನಲ್ಲಿಯುರಳುತಿರಲು !

ಬಿತ್ತು ಬೆಳಕಿನ ಮಳೆಯು ! ಬಿತ್ತಿದೆನು ಮೆಯ್ಯ ಹೊಲ !
ಚಿತ್ತವದು ಆಯ್ತು ಮುತ್ತುಗಳ ಗುತ್ತು !
ದಿಕ್ಕುದಿಕ್ಕಿನ ಹಕ್ಕಿ ಫಕ್ಕಫಕ್ಕನೆ ಹಾಡಿ
ದಿಕ್ಕುದಿಕ್ಕಿಗೆ ಒಯ್ದುವೆನ್ನ ಬಿತ್ತು !

ಒಲವು ಮೈದುಂಬಿ ಬರೆ, ನೆಲವು ಒಂದಡಿಯಾಯ್ತು !
ಒಲವೆ ! ಪರಿವೆಯ ಪರೆಯ ಹರಿದು ನಿಂತೆ !
ಕತ್ತುರಿಯ ಮೃಗವು ಉನ್ಮತ್ತಭಾವದಿ ಗಂಧ–
ವೆತ್ತೆತ್ತ ಚೆಲ್ಲುತ್ತ ಓಡುವಂತೆ !

* * * *

ನಿನ್ನೆರಕದೆರಕವನೆ ಹೊಯ್ದು ನನ್ನನು ಮಾಡಿ
ತನ್ನ ತನವನು ತೋರಿ ನನ್ನ ಪೊರೆದಿ !
—ಕರುಳ ಕರುಳಲ್ಲಿಟ್ಟು ಮೋಹಮಮತೆಯ ತಾಯಿ
ಕರುಳ ಕುಡಿಯನು ಇರದೆ ಕಾಯ್ವ ತೆರದಿ !

ಗುಬ್ಬಿ ಗುಬ್ಬಿಗೆ ಗುಟುಕು ಕೊಟ್ಟು ಸಲುಹುವ ತೆರದಿ
ಅಬ್ಬೆ ! ಮಮತೆಯ ಮೊಲೆಯನುಣ್ಣಿಸಿದೆಯೌ !
ಕಯ್ಯ ತೊಟ್ಟಿಲ ಕಟ್ಟಿ, ಪ್ರೀತಿಗೀತಿಯ ಪಾಡಿ,
ಒಯ್ಯನೊಯ್ಯನೆ ಉಯ್ಯಾಲಾಡಿಸಿದೆಯೌ !

ಕಟ್ಟಿ ಜೀವದ ತಮಕೆ ಜವನಟ್ಟುತಿರೆ, ನಿನ್ನ
ಹೊಟ್ಟೆಯೊಳು ಬಂದು ಹೊಸ ಹುಟ್ಟ ಕಂಡೆ !
ಅಮ್ಮ ! ನಲ್ಮೊಲೆಗಳಿಂ ತೊರೆಯಾಗಿ ಹರಿಯುತಿಹ
ಇಮ್ಮ ತೊರೆಯನು ಹೊಟ್ಟೆತುಂಬ ಉಂಡೆ !

ಹುಟ್ಟುಗುರುಡನಿಗೆ ಹೊಸದಿಟ್ಟಿಯನೆ ಕೊಟ್ಟಂತೆ,
ಮೊಟ್ಟಮೊದಲಿನ ಮುದ್ದು ಮುದ್ದಿಸಂತೆ,
ಬುದ್ಧಿಗಂದನಿಸಿತೌ —ಬೆಳಗುಮುಂಜಾವದಲಿ
ನಿದ್ದೆಯನು ತಿಳಿದೆದ್ದ ಕೂಸಿನಂತೆ !

ಮೈಗೊಂದು ಹುಟ್ಟುಂಟು, ಮನಕೊಂದು ಹುಟ್ಟುಂಟು !
ಹೀಗುಂಟು ಗಂಟಿನೊಳಗೊಂದು ಗಂಟು !
ತನುವೆಂಬ ಕೀಳುಹುಳು ನೆಲದಲ್ಲಿ ಹರಿಯುತಿರೆ,
ಮನದ ಪಾತರಗಿತ್ತಿ ಪಾರ್ವುದುಂಟು !

* * * *

ಕವಿಯ ಸ್ವಗತ:—

ನನ್ನಿನನ್ನಿಗಳ ಅದ್ವೈತಮೈತ್ರಿಯೊಳಿರುವ
ಬಿನ್ನಾಣವನ್ನು ಮನಗಂಡೆನಂದು—
“ಭಂಗುರದ ರಾಗವದು ಬೆಂಕಿಗೂಡದ ಮುನ್ನ
ಲಿಂಗಾಂಗಸಂಗವದು ಮಾಗದೆಂದೂ !

“ ಪ್ರೇಷ್ಠವನ್ನುಳಿದವನು ಶ್ರೇಷ್ಠದಲ್ಲುಳಿಯುವನು !
ಶ್ರೇಷ್ಠಪ್ರೇಷ್ಠವು–ಅದುವೆ ಬೇವುಬೆಲ್ಲ !
ಪ್ರೇಷ್ಠವಧರಕ್ಕೆ ಸಿಹಿ; ಶ್ರೇಷ್ಠವುದರಕ್ಕೆ ಸಿಹಿ;
ಅಷ್ಟು ಸವಿದವನೆ ಜಗಜೆಟ್ಟಿಯಲ್ಲ !

“ ನೆಲವಾಗಿ ತಾಳುವವ, ಮುಗಿಲಾಗಿ ಬಾಳುವವ,
ಸಲೆ ಲೋಕಕಾಳಾಗಿ ಆಳುವವನು,
ಶಿವನಾಗಿ ಬೇಡುವವ, ಸತಿಯಾಗಿ ನೀಡುವವ,
ಅವನವನೆ ನನ್ನಿ ! ಮೂಜಗದೋಜನು.

“ಎಲ್ಲಿ ನಡೆವುದು ಪೊಡವಿ, ಕೊಡುಗೈಯ ದೊರೆ ಕೊಡದೆ ?
ಇಲ್ಲಿ ಕೊಡುವಂಥವನು ಅಲ್ಲಿ ಪಡೆವ !
ಚೊಕ್ಕರಳು ತಾನಳಿದು ಚಿಕ್ಕೆಯಾಗುಳಿಯುವದು !
ಇಕ್ಕು ಜೀವದ ಬಿಕ್ಕೆ ! —ಬಂದ ದೇವ!

“ಹೊಸ ಹಾಲ ತೊರೆ ಸೂಸೆ, ಮಾತೆ ಮೊಲೆಯೂಡುವಳು:
ಹಸುಳನಿಗೆ ಆಗುಂಟು ಹಾಲ ಹಬ್ಬ!
ಪಾಲ್ತೊರೆಯ ನೆರೆ ಹರಿಯೆ, ಪ್ರೀತಿರಸ ಪುಟಿಪುಟಿಯೆ,
ನಲ್ದಾಯಿಯೆದೆಯಲ್ಲಿ ಹಾಡುಗಬ್ಬ !

“ ಎದೆಯ ಜೇಕಳಿಯಿಂದ ಒಲವಿನೋಕುಳಿಯಾಡು !
ಇದುವೆ ಜೀವವೆ ! ನಿನ್ನ ಹಿರಿಯ ಸಿರಿಯು !
ಕೂಸಾಗಿ ಆಡಿ, ನಲ್ದಾಯಾಗಿ ಊಡಿ, ಕೊಡ–
ಗೂಸಾಗಿ ನೋಡುವದೆ ಅರಸುಗುರಿಯು !

“ ಮಾಸಿದರು ಹೊಸಹೊಸದು, ಮೂಸಿದರು ಮಾಸಲದು,
ಲೇಸುಲೇಸಾದುದೀ ಸುಭಗ ಸೃಷ್ಟಿ !
ಏಸು ತಾಳಿದರೇನು, ಏಸು ಬಾಳಿದರೇನು,
ಈಸು ಮುಗುಳದಲೆ ಆ ದಿವ್ಯದೃಷ್ಟಿ ?

“ ಇಕ್ಕು ಜೀವದ ಬಿಕ್ಕೆ ! ಆಕೊ—ಅಕ್ಕ ಗೊಲ್ಲತಿಯು
ಚಿಕ್ಕೆಗಳ ತುರುಮಂದಿಯಲ್ಲಿ ಮೆರೆವಳ್ !
ಇಕ್ಕು ಬಿಕ್ಕೆಯು ! ಚೆಲುವಿನಿಕ್ಕೆ ಬೇಕಾಗಿರಲು—
ಅಕ್ಕ ಚೊಕ್ಕಿರುಳು ಕೈಮಾಡಿ ಕರೆವಳ್ ! ”

*          *          *          *

ಪರದೇಶಿಯಾಗಿ ಪಿರಿಪಿರಿ ಜಗದಿ ತಿರುಗುತಿರೆ
ಕರೆಕರೆಯಲೌ ಕರುಳು ಕರಗಿ ಬಾಯ್ಗಳ್ !
ಬಿಡದೆ ಬೇಸತ್ತಿರಲು, ನೇಹಮೋಹಗಳಿಂದ
ಕಡೆಗು ಉಡಿಗಳಲಿ ಎಡೆಕೊಡುವ ತಾಯ್ಗಳ್ !

ಭಾವವೇದಿಕೆಯಲ್ಲಿ ಯಾ ದಿವ್ಯವೇದವನು
ಭಾವಯೋಗಿನಿ ! ನೀನು ಕೊರೆದೆಯೆಂದು,
ಆ ರಾಜಮಂತ್ರವನು ಕಾವ್ಯಕಾವ್ಯದಿ ಬರೆದು,
ಸಾರುವೆನು—‘**ಮಾತೃದೇವೋಭವ** ’ ಎಂದು !

೧೯-೮-೧೯೨೭
(ಪ್ರಭವ ಕೃಷ್ಣಾಷ್ಟಮಿ, ಶಾ. ಶ. ೧೮೪೯)

# ವಾಮದೇವ

ಶತಂ ಮಾ ಪುರಃ ಆಯಸೀಃ ಅರಕ್ಷನ್ ಅಧಃ । ಶ್ಯೇನಃ ಜವಸಾ ನಿರದೀಯಂ
ಇತಿ ವಾಮದೇವಃ ಗರ್ಭೇ ಶಯಾನಃ ಅವೋಚತ್ ॥ (ಐತರೇಯ)

ಕಡುಕಟ್ಟಿದ ಕ–
ಬ್ಬಿಣದ ಕೋಟೆಗಳ
ಒಡೆದೆನು ಎನ್ನುತ
ವಾಮದೇವನವ
ತಾಯಿಯ ಬಸಿರಲಿ
ಉಸುರಿದನಂತೆ !
ಆ ಬಿಸಿಯುಸಿರು,
ಕಸಿವಿಸಿಯೆಸರು
ಹೃದಯ ಹೃದಯದಲಿ
ಕುದಿಯುತ್ತಿಹುದು.

*             *

ಒಡಲಿನ ಉರಿಯಲಿ
ಒಲವಿನ ಜೊತೆಯಲಿ
ನೊಲೆವಾಲ್ಬತ್ತಲು,
ಮಡಲಿನ ಕೂಸನು
ಹಾದಿಯ ಹುಡಿಯಲಿ
ತಾಯಿಯು ಬಿಸುಡಲು,
ಬೇಸಗೆ ಬಿಸಿಲಲಿ
ಕಮರಿದ ಕುಡಿಯಲಿ
ಕಾಣಿರ ಮಾಣದ ಕುದಿಯನ್ನು ?
ಬೆಂದ ಬಾಳ ಬೇಗುದಿಯನ್ನು ?

*             *

ಕಾಣಿರ ದಿನದಿನ
ಮನೆಮನೆಯಲ್ಲಿ
ನೆರೆವರ ನೋಳ್ಪರ
ಎದುರೆದುರಲ್ಲಿ
ಸೊಗಯಿಪ ಪೆಣ್ಗಳ
ಕಣ್ಗಳಲಿ
ಒತ್ತೊತ್ತಿಕ್ಕಿದ
ಮೂಕ ದುಃಖವನು ?

*        *

ಆಡಲು ಓಡಲು
ಹಾರಾಡಲು ಹಾ-
ತೊರೆಯುವ ಜೀವದ
ಉಸುಲನು ಕಟ್ಟಲು
ನಾಗರಿಕತೆಯದು
ನಾಗರ ಹಾವು !

*        *

ಜಗತಿಯ ಸೊಬಗಿನ
ನಗೆಮೊಗದಲ್ಲಿ
ಮಾನವ ಸಂಸ್ಕೃತಿ-
ಯೊಂದೇ ವಿಕೃತಿಯು !

*        *

ದೂರದ ತೊರೆಯಾ
ಜಿನುಗು ಜಿನುಗಿನೊಲು
ಯುಗಯುಗದಿಂದಲಿ
ಜಗತಿಯ ಮರುಗದು

ತೆರವಿನಿತಿಲ್ಲದೆ
ಮೊರೆಯುತ್ತಿಹುದು;
ಕರುಳು ಕರಗುವೊಲು
ಕರೆಯುತ್ತಿಹುದು.

* *

ಜೀವಜೀವಗಳ
ಹಿಂಗದಾಸೆಗಳು
ಮುಗಿಲನ್ನೇರುತ
ಗಾಳಿಯೊಳಲೆಯುತ
ಮರುಳುಗಳಂದದಿ
ಘೋರಿಡುತಿಹವು;
ಇರುಳಿನ ಜೀರುಂ-
ಡಿಗಳ ತಂಡದೊಲು
ಜೀರಿಡುತಿಹವು.

* *

ನೋವಿನ ವೀಣೆಯು
ಸೊಲ್ಲುತ್ತಿಹುದು:
ಆವನೊಬ್ಬನೂ
ಆಲಿಸಲೊಲ್ಲನು!
ಮಾನವಯೋನಿಯು
ತನ್ನೊಳು ತಾನೇ
ತನ್ನಯ ಸುತ್ತಲು
ಕೋಟೆಯ ಕಟ್ಟಿ,
ತಿಳಿವಳಿಕೆಯ ಬೆಳ-
ಕಿಂಡಿಯ ಮುಚ್ಚಿ,
ಕತ್ತಲೆಯೊಳಗಿನ

ನೆಲಮನೆಯಲ್ಲಿ
ಕತ್ತನು ಬಗ್ಗಿಸಿ
ಕನವರಿಸುತ್ತಿದೆ !

* *

ದುರ್ಗವು ದುರ್ಗದ
ಕಾರ್ಗವಿಯೊಳಕೆ
ನೂರು ಹೃದಯಗಳ
ಗಾರೆಯನರೆದಿದೆ !
ತೊಳಗುವ ಮಹಲಿನ
ತಳಹದಿ ಕೆಳಕೆ
ನೂರು ಜೀವಗಳ
ಶಾಪತಾಪಗಳು
–ಕ್ರಂದಿಪ ಮುಖಗಳ
ಜ್ವಾಲಾಮುಖಿಗಳು !

* *

ವಿಶ್ವರೂಪ ವೈ–
ಶ್ವಾನರನೀತನು
ಜೀವಜೀವಗಳ
ಜ್ವಾಲೆಜ್ವಾಲೆಯಿಂ–
ದುರಿವನು ಮೆರೆವನು,
ಕಾಳಗಕೇಳ್ವನು !
ಇಟ್ಟಿಗೆ ಕಟ್ಟಿಗೆ–
ಗಳ ಕಟ್ಟಡವನು
ಜಗತಿಯ ಕೊರಲಿಗೆ
ಕಟ್ಟಿದ ಹೊರೆಯನು

ನೂರ್ನಾಲಗೆಯಿಂ
ನೆಕ್ಕುವ ಮುಕ್ಕುವ !

*     *

ವಾಸುದೇವನಿವ
ಚಿರಂಜೀವನಿವ—
ಪ್ರತಿಮಾನಸದಲಿ
ವೇದನೆ–ಸಂವೇ–
ದನೆಯಲಿ ಹುದುಗಿಹ.

ಬಗೆಬಗೆಯಲಿ ಕ–
ತ್ತಲೆ ಕಿಡಿಸುವ ಕಿಡಿ—
ಮಾನವವಂಶದ
ಕುಲದೀಪಕನಿವ.

ಈತನು ರುದ್ರನು
ನಾಳೆಯ ಭದ್ರನು !
ಇಂದಿನ ಜಿಷ್ಣುವು
ಮುಂದಿನ ವಿಷ್ಣುವು !

ಮೇ ೧೯೩೨

## ಕಾರಸಿರಿ

ಸುಳಿಯೆಲರ ಕೆಳೆಯಲ್ಲಿ
ಎಳೆಮುಂಗುಳು ನಗುವಂತೆ
ನಲ್ದಾಯ ತಕ್ಕೆಯಲಿ
ಬಲ್ದು ತೂಕಡಿಸುತ್ತೆ
ಚಿಕ್ಕಂದಿನಲ್ಲೊಮ್ಮೆ । ಚಕ್ಕಂದವಾಡುತಿರೆ
ಬಂತು ಗಮುಗಮನೆ ನಿದ್ದೆ !
ಅಂತರಿಕ್ಷದ ಸೋನೆ– । ಯಂತೆ ಸಂತಯಿಸುತ್ತ
ಬಂತು ಗಮುಗಮನೆ ನಿದ್ದೆ !

ಅಕ್ಕ ! ಬೆಕ್ಕಸವಾಯ್ತು !
ಅಕ್ಕರೆಯ ತಕ್ಕೆಯಲಿ
ಇರ್ದು ನಲಿಯುತ್ತಿರಲು
ತೋರ್ದಳಾ ದೇವತೆಯು !
'ಆ'ಯೆಂದು ಕರೆದೊಡನೆ ।'ಆ'ಯೊವ ವತ್ಸಲೆಯು
—ಜೀವಜಾತಗಳ ಆಯಿ !
ನಿದ್ದಿಸುವ ಮಕ್ಕಳನು । ಕದ್ದು ಮುದ್ದಿಸುವಾಕೆ
—ದೇವಕುಲಕೆಲ್ಲ ದಾಯಿ !

ಚಿಣ್ಣನಾಟಕ್ಕೆಂದು
ಬಣ್ಣಬಣ್ಣದ ಬೊಂಬೆ–
ಯೊಂದ ತವಕದಿ ತಂದು
ತಂಬೆಯೊಯುವ ತೆರದಿ
ಕಕ್ಕುಲಾತಿಯ ದೇವಿ । ತಕ್ಕೈಸಿ ಲಲ್ಲೆಯಿಂ
ಅಕ್ಕಜವ ತೋರಿಸಿದಳು !
ಚಿಕ್ಕೆಯಂತಹ ಚೆಲುವ । ಚಿಕ್ಕ ಕನಸನ್ನೊಂದು
ಚಕ್ಕನೆಯೆ ತೋರಿಸಿದಳು !

ಭೀಕರಾಬ್ಧಿಯ ನಡುವೆ
ಭೂಕಮಲವರಳಿತ್ತು !
ತೂಗುಮಂಚದ ಹಾಗೆ
ತೂಗಿ ತೊನೆಯುತಲಿತ್ತು !
ಸಿರಿಯ ಕರುಮಾಡದೈ– | ಸಿರಿಯಂತೆ ಮೆರೆಮೆರೆದು
ತೋರಿದಳು ಲಕುಮಿಯಲ್ಲಿ !
ಮೂಡಲಿನ ಜಗುಲಿಯಲಿ | ನಾಡೆ ನಸುಕಿನ ತೆರದಿ
ಆರಕ್ತಕಾಂತಿಯಲ್ಲಿ !

ದಿಙ್ನಾಗಗಳು ನೆರೆದು
ನಗ್ನಲಕ್ಷ್ಮಿಯ ಮೇಲೆ
ಎತ್ತಿ ಸೊಂಡಿಲುಗಳನು
ಮುತ್ತುಗಳನೆರಚುವೊಲು
ದಿಕ್ಕುದಿಕ್ಕಿನ ನೋಡ | ನಾಕಭಾಗದಿ ಕೂಡಿ
ಸುರಿಸಿದವು ಸರಿಯನಲ್ಲಿ !
ತೋರವೈಭವದಿಂದ | ಕಾರಸಿರಿಯನು ಭರದಿ
ಎರೆವಂತೆ ಎರಕದಲ್ಲಿ !

ಕನಸಿನೊಳಗಿನ ರೂಪು
ಕಣ್ದೆರಿಯೆ ಕಂಡಿತಾ !
ಮನಸಿನೊಳಗಿನ ಭಾವ
ಮೈದಳೆದು ಬಂದಿತಾ !
ಇಚ್ಛೆಗಾರ್ತಿಯು ಗಾಡಿ | ಹುಚ್ಚು ಹಿಡಿಸುವ ಮೋಡಿ
ತಂತ್ರವನು ಮಾಡುವಂತೆ
ಕಣಿ ಕಂಡ ಮಾನಿಸನು | ಮನಮೂಗನಾಗಿರುವೆನು
ಮಂತ್ರವಶ ನಾಗನಂತೆ !

ಜನವರಿ ೧೯೩೩

## ಓಂ ಭವತಿ!

ಪ್ರೇಮನಿಧಿಯನು ಬಯಸಿ ನಿನ್ನ ಬಳಿ ಬಂದೆ
ಓಂ ಭವತಿಯೆಂದಂದು ಬಾಗಿಲಲಿ ನಿಂದೆ
ಮನವನುನ್ನತ ಪದಕೆ ಒಯ್ವ ದೇವಿಯು ಎಂದೆ
ಅಂಜಲಿಯ ಮೇಣು ಕಣ್ಗಳನೊಡ್ಡಿ ನಿಂದೆ

ಹೆಣ್ಣಿನಲಿ, ಹಕ್ಕಿಯಲಿ, ಮೋಡದಲಿ, ಗಾಳಿಯಲಿ,
ಒಡಲ ದುಗುಡಕೆ ಶಾಂತಿ ದೊರಕದೆಂದು,
ಓ ಉನ್ನತವೆ, ಬಂದೆ ಧಾವಿಸುತ ನಿನ್ನ ಬಳಿ
ಬೊಧಿವೃಕ್ಷದ ನೆರಳು ನಿನ್ನ ನೆರೆಯೆಂದು

ಆವ ಕಾರಣಕಾಗಿ ನನ್ನ ಕರಣಗಳೆಲ್ಲ
ಸೊಮ್ಮು-ಸುಮ್ಮಾನದಲಿ ನುಡಿಯುತಿಹವು !
ಕರುಳುಮರುಳಾಗಿಸುವ ಕೊರೆಯುವಿರಿಯುವ ತಾಲ-
ದಲ್ಲಿ ಮೈಮನವೆನಿತು ಮಿಡಿಯುತಿಹವು !

ಆಕಾಶವಾಣಿಯೇ ! ಓ ಕೊಡಾ ಜಾಣಿಯೇ !....
ಏನು.... ತೀರದ ಮೌನವೇ ನಿನ್ನ ವಾಣಿಯೇ ?

ನವಂಬರ ೧೯೩೩

# ಮಂಗಲವು! ಜಯ ಮಂಗಲವು!!

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ॥** (ಗೀತೆ)

(ಮಹಾತ್ಮರ ದಾಂಡೀಯಾತ್ರೆಯ ಸಂದರ್ಭದಲ್ಲಿ ಬರೆದುದು)

ಉತ್ತುಂಗರ ಊರ್ಜಿತರ ಆತ್ಮಗಳು
ಕತ್ತಲೆಯಲ್ಲಿಯೆ ಕೊಳೆಕೊಳೆಯುತ್ತಿರೆ
ಸತ್ತಿಹ ನಾಡಿನ ನಾಡಿನಾಡಿಯಲಿ
ಸತ್ಯಪ್ರೀತಿಗಳ ದಿವ್ಯಮಾತ್ರೆಯಿಂ ಹೊಸನೆತ್ತರವನು ಹರಿಸಿದಗೆ
ಮಂಗಲವು ! ಜಯ ಮಂಗಲವು !!

ಒಂದು ಕೆಯ್ಯು ಮತ್ತೊಂದನು ಕೊಯ್ಯುವ
ಕುಂದನು ತಿಳಿಯದೆ, ಬಂಧುಬಂಧುಗಳು
ಬಂಧುರಭಾವವ ತೊರೆದು ಉರಿಯುತಿರೆ,
ಬತ್ತಿದ ಮಾನವರಂತಃಕರಣದಿ ಕರುಣೆಯ ಸರಿಯನು ಸುರಿಸಿದಗೆ
ಮಂಗಲವು ! ಜಯ ಮಂಗಲವು !!

ಸಲೆ ದಿಗ್ವಲಯವ ತುತ್ತುವ ಹೆಡೆಯನು
—ನೆಲನೀರ್ಗಾಳಿಯ ಮುತ್ತುವ ಪಡೆಯನು
ಒಲವಿನ ಮಂತ್ರದಿ ಗೆಲಲು ಸಾಗಿದಗೆ
ಜಯಜಯ ಮೋಹನದಾಸಗೆ ಜಯಜಯ ಮೋಹನಾಸ್ತ್ರಧರವೀರನಿಗೆ
ಮಂಗಲವು! ಜಯ ಮಂಗಲವು!!

ಹರುಷದ ಬಾಷ್ಪದ ಸೇಸೆಯ ಸೂಸಿ
ಹರಕೆಯ ಹೂಗಳ ಬೊಗಸೆಯ ತೂರಿ
ಎರಕದಿ ಎರೆವೆವು! ಅರಿಕೆಯ ಕೊಳ್ಳೈ
ಅರಸೇ! ಜನಮನಸಿಂಹಾಸನದಲಿ ನೆಲಸೈ ನಿರುತದಿ ನೆಲೆಯಾಗಿ
ಮಂಗಲವು! ಜಯ ಮಂಗಲವು!!

ಜಯ ಹಗೆಯುಳಿದಗೆ, ಲೋಕದ ಗೆಳೆಯಗೆ
ಭಯವ ಮೀರಿದಗೆ, ನಯದ ಮೂರುತಿಗೆ
ಜಯ ಮಾನವ್ಯದ ಪಾರತೀರನಿಗೆ
ಜಯ ನಿಸ್ಸೀಮದ ಚರಮಸೀಮನಿಗೆ
ಜಯ ಜಯ ನಿರುಪಮನಿರ್ಮಲಗೆ

ಮಂಗಲವು! ಜಯ ಮಂಗಲವು!!

॥ ಭದ್ರಂ ಶುಭಂ ಮಂಗಲಂ ॥

೨೭–೩–೧೯೩೮

# ಹೊಸಬರ ಹಾಡು

(ನಗರ ಸಂಕೀರ್ತನೆಗಾಗಿ ಬರೆದುದು)

ಗಾಂಧಿಗುರುವಿನಾ ಗುಣಗಣಗಂಧವು
ಮೋಹನದಾಸನ ಮೋಹನಿಯು
ದೂರದ ದಾರಿಗೆ ಸೆಳೆಯುತ್ತಿದೆ ಹಾ !
ಮೋಹಿಸಿ ಮನವನ್ನೆಳೆಯುತಿದೆ !

ಬಂಧನದಾಚೆಗೆ ಒಯ್ಯುವ ಕೆಯ್ಯದು
ಮುಂದೆ ಮುಂದೆ ಹಾ ! ಕರೆಯುತಿದೆ !
ದೂರದ ಗುರಿಯನು ತೋರುವ ದೀಪವು
ತೊಳಗಿ ತೊಳಗಿ ಹಾ ! ಬೆಳಗುತಿದೆ !

ಬಡವರ ಬಗ್ಗರ ತಿರುಕರ ಕುಡುಕರ
ಅರೆಯೂಟದ ಅರೆಬತ್ತಲೆಯ
ಹರಕ ಮುರುಕ ಸಂಸಾರದ ಪಸರವ
ಹಸಮಾಡಲು ನಡು ಕಟ್ಟೆಹೆವು !

ಕೀಳುಕುಲಗಳೆನ್ನುತ ಕಡೆಗಾಂಬರ
ಕೀಳುಮನದ ಕಳೆ ಕೀಳುವೆವು !
ಹೊಸಗಾಲದ ಹೊಸ ಒಕ್ಕಲುಮಕ್ಕಳು
ಹೊಸ ಹೊಸ ಬೆಳೆಯನು ಬೆಳಸುವೆವು !

ಹೊಲೆಯರೆಂದು ಹೀಗಳೆಪರ ಹೃದಯದ
ಹೊಲೆಗೇರಿಯ ನಾವ್ ಬಳಿಯುವೆವು !
ಧಾರ್ಮಿಕರೆಂಬರ ಧರ್ಮಹೀನತೆಯ
ಆಗಸೆಯ ಬಾಗಿಲಿಗೆಳೆಯುವೆವು !

ಜಾತಿಯ ಭೂತವು ಬೆದರಿಸಲರಿಯದು,
ರೂಢಿಯ ಬೇಡಿಯು ಬಂಧಿಸದು !
ಭೂಮಿತಾಯ ಸಂತಾನವಾತ್ರ ಸ್ವಾ-
ತಂತ್ರ್ಯಕೆ ಕಾದುವ ಕ್ಷತ್ರಿಯರು !

ಹಿಂದೆಹಿಂದೆಯುಳಿದಕ್ಕತಂಗಿಯರ
ಆದರದಿಂದಲಿ ಕರೆಯುವೆವು !
ಅಕ್ಷರತೆಯ ಬೊಕ್ಕಸವನು ತೆರೆವೆವು,
ಸಮತೆಗೆ ಪಟ್ಟವ ಕಟ್ಟುವೆವು !

ಕಲ್ಪನೆ ಹೊಸದೇ ! ಶಿಲ್ಪವು ಹೊಸದೇ !
ಹೊಸಗಾಲದ ಹೊಸ ಶಿಲ್ಪಿಗಳು !
ದೈವತವೂ ಹೊಸ ! ದೇವಾಲಯ ಹೊಸ !
ಎಲ್ಲವು ನಮ್ಮದು ಹೊಸಹೊಸದು !

ಭೂತಕಾಲದಾ ಭೂತಗನ್ನಡಿಯ
ಭೀತಿಯು ನಮ್ಮನು ಬಾಧಿಸದು !
ಭವ್ಯವಿದೋ ಬಹು ಭವ್ಯವಾಗಿಹುದು !
ನಮ್ಮರಿಗಲ್ಲವೆ ಗೆಲ್ಲುವದು ?

ಹೊಸ ಹೊಸ ಹಾರೈಕೆಯ ಹಾರೈಸುತ
ಹೊಸ ಹೊಸ ಜಗಗಳ ಹುಡುಕಲು ಹಾರುತ
ಹೊಸ ಜನರಿಗೆ ಹೊಸ ವೇದವನುಸುರುವ
ಹೊಸಗಾಲದ ಹೊಸ ಹಾರುವರು !

ಎಲ್ಲರ ಬಿಡುಗಡೆಯೆನ್ನುವ ಬಲೆಯಲಿ
ಒಲವಿನಿಂದ ತೊಡಕಿಸಿಕೊಂಬ,
ಎಲ್ಲರ ಗೆಲವೇ ಗೆಲವು ನಮ್ಮದೆ-
ನ್ನುವ ಹೊಸ ಯೋಗದ ಸಾಧಕರು !

ಇದ ಪಡೆಯಲು ನಾವ್ ದುಡಿಯಲು ಬದ್ಧರು,
ಇದ ಕಾಪಾಡಲು ಮಡಿಯಲು ಸಿದ್ಧರು!
ಅದುದಿನದಲಿ ತನುಮನದಲಿ ಸವೆವೆವು,
ಕೊನೆಯಲ್ಲಿದನೇ ಸವಿಯುವೆವು!

## —ಗೆ

ಬಂದಿತೆಲ್ಲಿಂದಲೋ ಮಧುರ ಸೌರಭವು
ಗಂಧದಿಂದಿಡುಗಿತ್ತು ಮಾನಸದ ನಭವು!

ಏಕಾಕಿ ಜೀವನವನಾವರಿಸಿ ನಿಂದು
ಲೋಕ ಸುಖ ಸಾರವನು ತೀವಿಸಿತು ತಂದು !

ಸೊದೆಯು ಬಟ್ಟಲಿನಂತೆ ನಮ್ಮ ಸಂಪ್ರೀತಿ !
--ಹೃದಯದಲ್ಲಿರಲಾರದೇಕೆ ಸಂಪೂರ್ತಿ ?

ಜಕ್ಕವಕ್ಕಿಗಳಂತೆ ಇದಿರಿದ್ದು ಕಂಡಿಲ್ಲ!
ಅಕ್ಕರೆಯು ನಮ್ಮದೇ ನಮಗೆ ಮರೆಯಲ್ಲ!

ತೆರೆ ಹರಿದು, ಮನ ತೆರೆದು, ಆತ್ಮಸಖಿ, ಬಾರ !
ಮರೆಮಾಚಿ ನಿಂತ ನಿಜಸೌಂದರ್ಯ ತೋರ!

ಜುಲೈ ೧೯೩೪

# ನಾವಿಕರು

(ಒಂದು ಇಂಗ್ಲಿಷ್ ಗೀತದಿಂದ)

ಸಾರಂಗ

ಕೊನೆಯಿಲ್ಲದ ನಲ್ವಾಡಿನ ಕಡಲಲಿ
ಕುಣಿಯುವ ಮಣಿಯುವ ಅಲೆಗಳ ಮಡಿಲಲಿ
ತೂಗುವ ತೊನೆಯುವ ತಾವರೆಯು!
ಸಾಗಿದೆವದರಲಿ ಈವರೆಯು!

ಜಾರುವ ಗಿರಿಗಳ ತೊರೆಗಳ ಜರೆಯುತ
ನೀರಲಿ ಗೆರೆಯಿರದೊಲು ಮುಂದರಿಯುತ
—ತೆಂಕಣ ಗಾಳಿಯ ತೀಟ—
ನೌಕೆಯ ಮೆಲ್ಲನೆಯೋಟ!

ಚಿಮ್ಮುತ ಕಾಲ್ಗಳ, ಹೊಮ್ಮುಗಿಲಂಚಲಿ
ಹೊಮ್ಮಿದ ಬಣ್ಣದ ಬುಗ್ಗೆಯ ಬೆರಗಲಿ,
ಹೊರಟೆವು ನಲಿನಲಿದಾಡಿ
ಮರಿಯುರಸಂಜೆಯ ಹೂಡಿ!

ಆಗಸ್ಟ ೧೯೩೪

# ಹಗಲು

ನಾನು ಜಗತಿಯ ಹಗಲು, ಬಯಲ ಹಬ್ಬುಗೆಯಲ್ಲಿ
ಹೊತ್ತಿಸಿದ ಇಡಿಬೆಂಕಿ–ತುಂಬುಧಗೆ–ನಿಬ್ಬೆಳಗು!
ನಿಚ್ಚಳದ ನಡುವಗಲು, ಕಾಲಚಕ್ರದ ಕೀಲ!
ಮುಗಿಲಿನಗಲವು ಹೊಗಳುವದು ನನ್ನ ಬೆಳುಜಸವ!

ಜನದ ನೆತ್ತಿಯ ಕಣ್ಣು–ನಾನೆ ಲೋಕದ ಕಾಣ್ಕೆ!
ಕಳ್ತಲೆಯ ಸೆರೆಯಿನೆಳ್ಚರಿಸುವೆ ಚರಾಚರವ!
ಬಾಳ ಬಿಳ್ತಿನ ಮೊಳಕೆ ಮಿಳ್ತುವಿನ ತಕ್ಕೆಯಿಂ–
ದಗಲಿಸುವೆ–•–ಬೆಳಕಿನಳಿಯದ ತಿಳಿವ ತೀವಿಸುವೆ!

ವಿಶ್ವದಂತಃಪುರವು—ಭಾವನೆಯ ಮಧುವನವು—
ಇರುಳುವೆಣ್ಣಿನ ಗುಟ್ಟಿನರಮನೆಯ ದಿಗ್ಭ್ರಮವು
—ಅದು ನನಗೆ ನಶ್ವರವು—ಕರಗಿಸುವೆನಾ ಕನಸ!
ಕೆಯ್ಯ ಬರಿಸೋಂಕಿನಿಂದುಡುಗುವೆನು ಉಡುಗಣವ!

ಆವರೆನ್ನೆದೆಯಾಳದೊಳಗೆ ನೆಲಸಿದೆಯೊಲವು
—ಮುಸುಕನೋಸರಿಸಿ ಚೆನ್ನಗೆ ಚಿಮುಕಿಸುವ ನಸುಕು!

ಸಪ್ಟಂಬರ ೧೯೩೪

# ಕ್ಷಮೆ

ಇದುವೆ ದಿಟದ ದಾರಿಯೆಂದು
ಬಾನಿನುದ್ದ ಬೆಂಕಿಸಾಲು
ದುಮುದುಮಿಸುತಲಿರುವುದು !

ಆದರೇನು ! ಸನ್ನೆಗೆಯ್ದು
ಸೂರೆಗೊಳುವ ಸಟೆಯ ಸೆರಗ
ಹಿಡಿದು ಮನವು ನಡೆವುದು!

ಒಂದು ಸಲವೆ ಬಗೆಯು ಬಗೆಪ
ಕೀಳ್ಮೆಗಾಗಿ ನೂರು ನೂರು
ಬಾರಿ ಗಲ್ಲು ಸಾಲದು!

ಆದರೊಂದಪಾರ ಕರುಣೆ
ಕ್ಷಮೆಯ ಸೆರಗ ಹೊಚ್ಚಿ ಕರೆದು-
ಕೊಳುವುದೆಂದು ಹೊಳೆವುದು !

ಅಕ್ಟೋಬರ ೧೯೩೪

# ಲಲಿತ ಲಾಸ್ಯ

ತಿಲಂಗ

ಭೂಮಿವ್ಯೋಮಗಳನು ಮೀರಿ
ಕ್ಷೀರದೀ ವಿಶಾಲ ಜಡದ
ಮೋಡಿಯಲಿಯು ಮೆಲ್ಲಡಿಯಲಿ
ರೂಪವೊಂದು ಸುಳಿವುದು !

ಒಲವು–ನೋವು–ಬಾಳ ಚೆಲುವು
–ಆಸೆ–ಮರುಕ–ಮುನ್ನ ಕನಸು
ಜೀವವೀಣೆಯನ್ನು ಮಿಡಿಯೆ
ಭಾವವೊಂದು ನಲಿವುದು !

ಮನಕು ನಿಲುಕಲರಿದು ನಿಲುವು
—ಮರೆಯಲಿ ನಿಲ್ಲುತೆ, ಚೆಲುವಿನ
ಚಿನ್ನಾಟದ ಹೊನ್ನೆಳೆಯೆನೆ
ಛಂದವೊಂದು ಹೊಳೆವುದು !

ರೂಪ–ಭಾವ–ಛಂದಗಳನು
ತನ್ನಲಿಯಳವಡಿಸಿಕೊಳುತೆ
ಜೀವಲಹರಿಯಾಗಿ ಹರಿದು
ಲಲಿತ ಲಾಸ್ಯವೆಸೆವುದು !

ನವಂಬರ ೧೯೩೪

# ಬೋಧಿವೃಕ್ಷ

## ಮೋಹನ

ಬೋಧಿವೃಕ್ಷದಿಂದಲೊಂದು
ಬೆಳಕು ಚಿಮ್ಮಿ, ಲೋಕಹೃದಯ
ಬಳಲುವ ಜಡ-ಜೀವಕಾಗಿ
ತುಳುಕುವಂತೆ ಮುಸಗಿತು.

ಅನ್ಯರಕ್ತ, ಅನ್ಯವರ್ಣ,
ಅನ್ಯದೇಶ, ಅನ್ಯಧರ್ಮ,
—ಅನ್ಯವೆಲ್ಲ ತನ್ನದೆಂದು
ಮನೆಮನೆಯಲಿ ಕರೆಯಿತು.

ಜಗತಿಗೆ ತನಿನೆಳಲ ನೀಡಿ,
ಒಲವಿನ ಸವಿಗುಟುಕನಿತ್ತ
ಬೋಧಿತರುವೆ! ನಿನ್ನಡಿಯಲಿ
ಕಾಳರಾತ್ರಿ ಕವಿಯಿತು!

ಫೆಬ್ರುವರಿ ೧೯೩೫

## ಪುನರುಚ್ಚಾರ

### ಜೀವನಪುರಿ

ನಿನ್ನನುಪ ಸೌಂದರ್ಯ ಅಣುಕಣದಿ ಕಾಣಲ್ಕೆ
ಕಣ್ಣುಗಳ ಕಾಣಿಕೆಯ ನೀನಿತ್ತಿಯಲ್ತೆ ?

ಇಂತಿರಲು ಪೆರತೊಂದು ಸೊಗಸಿಗೆಳಸುವುದೇಕೆ?
ಕಂತುಪಿತ, ನಿನ್ನುಳಿದು ಇನ್ನು ಚೆಲುವುಂಟೆ ?

ಕಂತು ನಿನ್ನಯ ಸೂನು, ನಿನ್ನ ನೋಡಲು ಬಿಡನು !
ಮಂತರಿಸಿ ಸಮ್ಮೋಹನಾಸ್ತ್ರವನ್ನು—

ಹೊನ್ನ ಹೊಗೆಪರದೆಯನು ಹೆಣೆದು, ಹಾದಿಯ ಕಟ್ಟಿ,
ಚೆನ್ನ, ನಿನ್ನಯ ಚೆಲುವ ಮರೆಗೊಳಿಪನು !

ಮುನ್ನೋಡ ಬಯಸುತಿಹೆ! ಮುನ್ನುಗ್ಗಲೆಳಸುತಿಹೆ!
ಬಣ್ಣಬಣ್ಣದ ಮಾಯೆ ಕಣ್ಣ ಕಟ್ಟುವುದು !

ಸುರೆಯ ಪಾತ್ರವನೊಡ್ಡಿ, ಮನವ ದಿಗ್ಭ್ರಮೆಗೊಳಿಸಿ,
ಕರಣಗಳ ಸೆರೆಗೊಳಿಸಿ, ದಾರಿ ಮರಸುವುದು !

ಹಾರುತಿದೆ ಗರುವದಲಿ, ಬಾನ ಕೆಣಕುವ ತೆರದಿ
ದೂರಗಿರಿಶಿಖರದಲಿ ವಿಜಯಕೇತನವು !

ಎದೆಯ ರಕುತವ ಸುರಿಸಿಯಾದರೂ ಕೊನೆಗೊಮ್ಮೆ
ಅದನೆ ಪಡೆವುದೆ ಜೀವ ತೊಟ್ಟ ಪಣವು !

ಹಾದಿಹುಡಿಯಲಿ ಬಿದ್ದು, ಗಾಸಿಯಾದರು ಜೀವ
ಆ ದೂರತಾರೆಯನೆ ನಿಚ್ಚ ನಿರುಕಿಪುದು !

ಸೋತುಹೋದರು ಮೈಯು, ಮನವು ಹಾರೈಸುತಿದೆ
ಆ ತೋರ ಚೆಲುವಿನೆಡೆ ಹಾರುತೈತರಲು !

ಮುದುಡಿಕೊಂಡಿಹ ಮನಕೆ ನವಚೇತನವನಿತ್ತು
ಸದಯ, ನಡೆಯಿಸು ಮುನ್ನ ಕಾಳಗದ ಕಳಕೆ!

ಹೊಸೆದು ಬೀಸಿದ ಬಣ್ಣಬಣ್ಣಗಳ ಜಾಳಿಗೆಯ
ಮಸೆದ ಬುದ್ಧಿಯ ಧಾರೆಯಿಂ ಸೀಳುವಂತೆ—

ಕರುಣಿಸೈ! ಬಾನುದ್ದ ಪಸರಿಸಿದ ಹರಕೆಯೋ!
ಸ್ಮರಿಸಿ ನಿನ್ನಯ ನಾಮ, ಮುಂದರಿವೆನು!

೧೬-೨-೧೯೪೭

# ಸೂಚಿ

**ಎರಡು ಶಕ್ತಿಗಳು** (ಪು. ೩)

ತಾರುಣ್ಯದ ಹೊಸ್ತಿಲಲ್ಲಿ ಕಾಲಿಡುವ ಜೀವಕುಮಾರನು ಆಶೆಯಿಂದ ಭವಿಷ್ಯವನ್ನು ನಿರೀಕ್ಷಿಸುತ್ತಿದ್ದಾನೆ. ಒಳಗಿನ ಶಕ್ತಿಗಳು ಅರಳಿ, ಮಹತ್ವಾಕಾಂಕ್ಷೆಯನ್ನು ಕುದುರಿಸುತ್ತವೆ. ಎರಡು ಕಲಾಶಕ್ತಿಗಳು ಮುಂದೆ ಬಂದು, 'ನನ್ನೆಡೆ ಬಾ' 'ನನ್ನೆಡೆ ಬಾ' ಎಂದು ಕರೆಯುತ್ತಿವೆ. ಯಾವುದಕ್ಕೆ ಜೀವನವನ್ನು ನಿವೇದಿಸಲಿ?— ಎಂಬ ಪ್ರಶ್ನೆ ಕವನದಲ್ಲಿ ಒಡಮೂಡಿದೆ. (ಇದನ್ನು ಬರೆದಾಗ ನನ್ನ ವಯಸ್ಸು ೧೭.)

**ಉಷೆ** (ಪು. ೬)

ಬೆಳ್ಳಿ=ಶುಕ್ರತಾರೆ

**ಪಶ್ಚಾತ್ತಾಪಪೂತ** (ಪು. ೮)

ಮೂಲ ಕವನವನ್ನು ಇದ್ದಕ್ಕಿದ್ದಂತೆ ಇಲ್ಲಿ ಪ್ರಕಟಿಸಲಾಗಿದೆ. ಇದನ್ನೆ ಸ್ವಲ್ಪ ಮಾರ್ಪಾಟುಗಳೊಂದಿಗೆ 'ಜಯಕರ್ನಾಟಕ'ದ ೧೨ನೆಯ ಸಂಪುಟದ ೧ನೆಯ ಸಂಚಿಕೆಯಲ್ಲಿ (ಜನವರಿ ೧೯೩೪), 'ಆತ್ಮಗೀತ' ಎಂಬ ತಲೆಕಟ್ಟಿನಲ್ಲಿ ಪ್ರಕಟಿಸಲಾಗಿತ್ತು. ನನ್ನ ಪರಮ ಮಿತ್ರರಾದ ದಿವಂಗತ ಶ್ರೀ. ಹ. ಪೀ. ಜೋಶಿಯವರ ಸೂಚನೆಯ ಮೇರೆಗೆ, ಇದರಲ್ಲಿಯ 'ಬದ್ಧಬುದ್ಧಿಯ ಬೂದಿ............' ಹಾಗೂ 'ನನ್ನಯ ವಿಚಾರಗಳ........' ಎಂಬ ನುಡಿಗಳನ್ನು ಬಿಟ್ಟುಕೊಟ್ಟು, ಕೆಳಗಿನ ನುಡಿಯನ್ನು ರಚಿಸಿ ನಾಲ್ಕನೆಯದಾಗಿ ಹಾಕಲಾಗಿತ್ತು:—

ಕೋಟಿಯುಗವೀಚಿಗಳು ಉರುಳ್ದರೂ ತೆರಳ್ದರೂ
ಸಾಟಿಯಿಲ್ಲದ ಸೆರೆಯಲಿದ್ದ ಕಲ್ನಿದ್ದೆಯನು
ಮೀಟಿ, ಜೀವಾಂಕುರವ ನಾಟಿಸುವ ಪದರವವು
ಬರುತಲಿದೆ ದೂರದಿಂದ!

ಆರನೆಯ ನುಡಿ 'ಜೀವಕುವರಿಯು.......' ಮೊದಲಿನಂತೆಯೇ ಇತ್ತು.

ಕವನದ ಈ ರೂಪದಲ್ಲಿ ಇಂದ್ರನಿಗಾದ ಶಾಪ ಹಾಗೂ ಅಹಲ್ಯೋದ್ಧರಣದ ಸಂಕೇತಗಳು ಸೂಚ್ಯವಾಗಿ ಬಳಸಲ್ಪಟ್ಟಿವೆಯೆಂಬುದನ್ನು ಹೇಳಬೇಕಾಗಿಲ್ಲ.

ವಾಚಕರು ಎರಡೂ ರೂಪಗಳಲ್ಲಿ ಈ ಕವನವನ್ನೋದಿ ಯಾವುದು ಸರಸವೆಂಬುದನ್ನು ನಿಷ್ಕರ್ಷಿಸಲಿ.

**ಪ್ರತಿಭೆಗೆ—** (ಪು. ೧೧)

ಪ್ರೊಸ ಚೆಲ್ವಿಕೆಯ ನವಿಲನೇರ್ದ=ನವೋನವ ಸೌಂದರ್ಯವೆಂಬ ನವಿಲನ್ನೇರಿ ಬಂದ. ಹೊಸಗೆ=ಆನಂದ. ಪ್ರೊಸಗೆ=ಹೊಸತನ. 'ಸುಮನೋ-ಜ್ಞೆ' ದ್ವ್ಯರ್ಥದಲ್ಲಿ. ನಡೆಮುಡಿ=ಹಡಗಿ.

ಈ ಕವಿತೆಯನ್ನು 'ಪ್ರತಿಭೆ' ಎಂಬ ನನ್ನ ಪ್ರಬಂಧಕ್ಕೆ ಪೂರಕವಾಗಿ ಓದಿಕೊಳ್ಳಬೇಕು.

**ಗೆ—** (ಪು. ೧೩)

ಶ್ರೀ. ಸಿದ್ಧವ್ವನಹಳ್ಳಿ ಕೃಷ್ಣಶರ್ಮರ ಜನ್ಮದಿನನಿಮಿತ್ತವಾಗಿ ಬೇರೆ ಬೇರೆ ಗೆಳೆಯರು ಬರೆದ ಕವನಗಳಲ್ಲಿ ಇದೊಂದು.

**ಆಂ** (ಪು. ೧೪)

ಆತ್ಮನ ನಿಜಸ್ಥಿತಿಯೇನು? 'ಪುರುಷ'ನು—ನಿರಾಲಂಬಸ್ಥಿತಿಯಲ್ಲಿಸ್ತ ಆತ್ಮನು ಲೀಲೆಗಾಗಿ ಪ್ರಕೃತಿಯ ಕೈವಿಡಿದು ಈ ಪ್ರಪಂಚದಲ್ಲಿಯ ಸಿಹಿಕಹಿಗಳ ಸುಖವನ್ನನುಭವಿಸಲು ಎಂತು ಬಂದ? ಈ ಮರೆವಿನಲ್ಲಿಯೂ ತನ್ನ ನಿಜಸ್ಥಿತಿಯ ಅರಿವಿನ ಸಾಧನೆಯನ್ನು ಎಂತು ಮಾಡುವ, ಹಾಗೂ 'ತಾನೆ ತಾನಾಗಿ' ತನ್ನತನವನ್ನು ತೋರುವ? —ಎಂಬೀ ಗೂಢ ವಿಚಾರಗಳನ್ನು ವ್ಯಕ್ತಗೊಳಿಸಲು ಈ ಕವನದಲ್ಲಿ ಪ್ರಯತ್ನ ಮಾಡಿದೆ.

ಪ್ರತಿಪದದ ಧಾತ್ವರ್ಥವನ್ನು—ಗೂಢಾರ್ಥವನ್ನು—ಯೋಗಾರ್ಥವನ್ನು ಹೊರತರಂತು ಉಪಯೋಗಿಸುವ ಪ್ರಯೋಗವಾಗ 'ಗೆಳೆಯರ

ಗುಂಪಿ' ನಲ್ಲಿ ನಡೆದಿತ್ತು. ಆ ಸಮಯದಲ್ಲಿ ಇದನ್ನು ಬರೆದದ್ದು. ಇವರಲ್ಲಿಯ ಪ್ರಯೋಗಗಳು ತುಂಬ ಈ ರೀತಿಯವಾಗಿವೆ. ಉ: ಪ್ರಾಕೃತ, ಪೌರುಷ, ನೀರು, ಮಡವಿ, ಕುರುಹು, ಕುರುಡ.

ಅರಿಲು=ನಕ್ಷತ್ರ. ಬರ್ದು=ಸಾವು. ನಾಲ್ಕುಸಿರು=ಚತುರ್ವೇದ.

**ಓರ್ವ ದೇವಿ** (ಪು. ೧೭)

ಸೌಂದರ್ಯವನ್ನು ಅರಸುತ್ತ ಹೊರಟವನಿಗೆ, ಅದು ಮೊದಲು ತನ್ನ ಮೋಹನಾಕಾರವನ್ನು ತೋರಿ, ಇಂದ್ರಿಯಮನಗಳನ್ನು ಆನಂದ ವೀಚಿಯಾಗಿ ಬಂದು ಮುತ್ತುವುದು. ಇದು ಸೌಂದರ್ಯದ ಪ್ರಥಮಾನುಭವ. ತರುವಾಯ ಬುದ್ಧಿಸೌಂದರ್ಯವಾಗಿಯೂ ಆತ್ಮ ಸೌಂದರ್ಯವಾಗಿಯೂ ಅದು ಪ್ರಕಟವಾಗುವುದು. ಇದನ್ನು Sensuous Beauty, Intellectual Beauty, Spiritual Beauty ಎಂದು ಹೆಸರಿಸಬಹುದು. ಲಕ್ಷ್ಮಿ, ಸರಸ್ವತಿ, ಪಾರ್ವತಿ ಎಂಬ ನಮ್ಮವರ ಪ್ರತೀಕಗಳು ಸೌಂದರ್ಯದ ಈ ಮೂರಂತಸ್ತುಗಳನ್ನೆ ಸೂಚಿಸುತ್ತವೆ.

ಈ ಕವನಕ್ಕೆ 'ಮೊದಲನೆಯ ದೇವಿ' ಎಂದು ಮೊದಲು ಹೆಸರಿಟ್ಟಿದ್ದೆನು. ಕ್ರಮೇಣ 'ಎರಡನೆಯ ದೇವಿ' 'ಮೂರನೆಯ ದೇವಿ' ಎಂದು ಇನ್ನೆರಡು ಕವನಗಳನ್ನು ಬರೆಯಬೇಕೆಂದಿದ್ದೆನು. ಆದರೆ ಆ ಎರಡು ದೇವಿಯರು ಬೇಗನೆ ಬರಲಿಲ್ಲವಾದ್ದರಿಂದ, 'ಓರ್ವ ದೇವಿ' ಎಂದು ಇದಕ್ಕೆ ಬೇರೆ ಹೆಸರನ್ನಿಟ್ಟೆನು. 'ಹಕ್ಕಿ ಹಾರುತಿದೆ' ಎಂಬ ಗೆಳೆಯರ ಕವನಸಂಗ್ರಹದಲ್ಲಿ ಇದು ಮೊದಲು ಪ್ರಕಟವಾಗಿತ್ತು.

ಸೌಂದರ್ಯದ ಮೂರಂತಸ್ತುಗಳನ್ನು ಬಣ್ಣಿಸುವ ಕವನವೊಂದನ್ನು ಹಲವು ವರ್ಷಗಳ ತರುವಾಯ ಬರೆದೆನು. (ಲಲಿತ ಲಾಸ್ಯ—ಪು. ೫೪)

ಕೊನೆಯ ನುಡಿಯಲ್ಲಿ 'ನನ್ನ ಯುಜರಿವ' ಎಂದು ತಪ್ಪಾಗಿ ಅಚ್ಚಾದುದನ್ನು 'ನನ್ನ ಜರಿಯುವ' ಎಂದು ತಿದ್ದಿಕೊಂಡು ಓದಬೇಕು.

**ನೂತನಬ್ರಹ್ಮ** (ಪು. ೨೩)

ಈ ಕವನವೂ 'ಹಕ್ಕಿ ಹಾರುತಿದೆ' ಎಂಬ ಕವನಸಂಗ್ರಹದಲ್ಲಿ ಅಚ್ಚಾಗಿತ್ತು.

**ಅಹಹ ಅಪೌರುಷೇಯವೇ !** (ಪು. ೨೪)

ಬಗೆಮುಗಿಲು = ಮನಸ್ಸಿನ ಆಕಾಶ.

**ಹಾಲಕ್ಕಿ** (ಪು. ೨೫)

'ರಾಗ' ಶಬ್ದದ ಮೂರು ಅರ್ಥಗಳನ್ನು ಗಮನಿಸಬೇಕು.

**ಶ್ರೀಮದಾನಂದತೀರ್ಥ !** (ಪು. ೨೬)

೧೯೨೪ ನೆಯ ಇಸ್ವಿಯ ಅಕ್ಷಯ್ಯತೃತೀಯೆಯ ದಿನ, ಗೆಳೆಯರ ಗುಂಪಿಗೆ ಗುರುಸ್ಥಾನದಲ್ಲಿದ್ದ ಒಬ್ಬ ಹಿರಿಯರ ಸಲಹೆಯ ಮೇರೆಗೆ, ಸಖ್ಯಸಂವರ್ಧನಕ್ಕಾಗಿಯೂ ಆತ್ಮಶುದ್ಧಿಗಾಗಿಯೂ ಗೆಳೆಯರು ಒಂದು ಅನುಷ್ಠಾನವನ್ನು ಕೈಕೊಂಡರು. ಶ್ರೀಮನ್ಮಧ್ವಾಚಾರ್ಯರ ವಾಯುಸ್ತುತಿಯನ್ನೋ ಇನ್ನಾವ ಕೃತಿಯನ್ನೋ ವಿಧಿಪೂರ್ವಕವಾಗಿ ಪಠಿಸಲು ಹಿರಿಯರು ಹೇಳಿದ್ದರು. ಆದರೆ (ನನ್ನ 'ಜಾತಿ' ಯು ಅಡ್ಡಬಂದ ಕಾರಣ) ನಾನು ಮಾತ್ರ ಅದನ್ನು ಪಠಿಸದೆ, ಬರಿ ರಾಮನಾಮವನ್ನೆ ಜಪಿಸಿದಂತೆ ನೆನಪಿದೆ. ಅದೆಂತಿದ್ದರೂ, ನನ್ನಾದಿನದ ಆತ್ಮನಿರೀಕ್ಷಣೆಯಲ್ಲಿ, 'ಶ್ರೀಮಧ್ವಾಚಾರ್ಯರ ಜೀವನಸಂದೇಶವಾವುದು? ಭಕ್ತಿಯ ರಹಸ್ಯವೇನು? ಭಕ್ತಿಯೆಂದರೆ ಭಗವಂತನನ್ನು ಆಶ್ರಯಿಸಿದ ಜೀವನ; ಭಗವಂತನ ನಿಕಟ ಸಾನ್ನಿಧ್ಯದ ಅರಿವು. ಮುಕ್ತಿಯಲ್ಲಿ ಬಿಡುಗಡೆ ಇದ್ದರೆ, ಭಕ್ತಿಯಲ್ಲಿ ಹೆಚ್ಚಿನ ಹತ್ತುಗಡೆಯುಂಟು. ಮುಕ್ತಿ ಭಕ್ತಿಗೆ ದಾರಿ' ಎಂಬೀ ವಿಚಾರಗಳು ತೆರೆತೆರೆಯಾಗಿ ಹೃದಯದಾಳದೊಳಗಿಂದ ಬಂದವು. ಆ ಆನಂದಾನುಭವದ ಫಲವೇ ಈ ಕವನ.

ಸಾಹಿತ್ಯ ಪರಿಷತ್ತಿನ ಹಿರಿಯರಲ್ಲೊಬ್ಬರಾದ ದಿವಂಗತ ಶ್ರೀ. ಕರ್ಪೂರ ಶ್ರೀನಿವಾಸರಾಯರಿಗೆ ಈ ಕವನ ಬಹಳ ಮೆಚ್ಚಿಕೆಯದಾಗಿತ್ತು. ಅವರು ಧಾರವಾಡಕ್ಕೆ ಬಂದಾಗ ಗೆಳೆಯರ ಗುಂಪಿನ ಚಾವಡಿಗೆ ಭೆಟ್ಟಿಕೊಟ್ಟು, ಇದನ್ನು ನನ್ನಿಂದ ಓದಿಸಿ, ಹತ್ತೋ ಹದಿನೈದೋ ರೂಪಾಯಿ ಬಹುಮಾನ ಕೊಟ್ಟರು!

ನಾನ ಬಂದಿಹೆನು = ಸ್ನಾನ ಮಾಡಲು ಬಂದಿರುವೆನು.

ಪಡೆದೆ! ನಾನು ನಿನ್ನನು ಪಡೆವೆ!' ಎಂದು ಪ್ರತಿಜ್ಞಾಪೂರ್ವಕವಾಗಿ ತನ್ನ ಜೀವಭಾವವನ್ನೇ ನಿವೇದಿಸಿಕೊಳ್ಳಲಾಗಿ, ನೆಲಮುಗಿಲುಗಳ ನೊಂದಾಗಿಸಿ, ತನ್ನ ತೇಜದಿಂದ ಹಗಲಿರುಳುಗಳನ್ನರಳಿಸುತ್ತ ನಿಂತ ಅವಳ ವಿಶ್ವರೂಪದ ಕಡೆಗೆ ತುದಿಗಾಲ ಮೇಲೆ ನಿಂತು, ಬಳ್ಳಿ ಅಲ್ಪರಿ ಯುವಂತೆ ಅವಳಿಗಾಗಿ ಅಂಗಲಾಚುವುದಾಗಿ ತನ್ನನ್ನು ಕಾಣುವನು. ಈ ಅನುಭವದ ಸಂತತಾಭಿಷೇಕದಿಂದ ಉನ್ಮಾದಪೂರಿತವಾದ ಜೀವಕ್ಕೆ ಶರದೃತುವಿನ ನಿರ್ಜಲ ಮೇಘಗಳೇ ಸರಸ್ವತಿಯ ಮೇಘ ರಾಗದಿಂದ ಕರೆವಂತೆ ಭಾವನೆಯಾಗಲು, ಆ ಬೆಳಕಿನ ಮಳೆಯಲ್ಲಿ ತರುಣನ ಮನವು ಮತ್ತಮಯೂರದಂತೆಯೂ, ಕಸ್ತೂರಿಯ ಮೃಗ ದಂತೆಯೂ ಎತ್ತೆತ್ತೋ ಕುಣಿಯಿತು, ಎತ್ತೆತ್ತೋ ಓಡಿತು. ಈ ಕುಣಿದಾಟ ಓಡಾಟಗಳಿಗೆ ವಿಪುಲವಾದ ಪೃಥ್ವಿಯೂ 'ಒಂದಡಿ ಯಾಯ್ತು'ಂತೆ. ಆಗ ಅವಳ ತಾಯಿತನದ ಮತ್ತು ತನ್ನ ಕೂಸುತನದ ಅನುಭವವು ಬಂದು, ತನಗೆ ಪುನರ್ಜನ್ಮವಾಗಲು,

ಮೈಗೊಂದು ಹುಟ್ಟುಂಟು, ಮನಕೊಂದು ಹುಟ್ಟುಂಟು!
ಹೀಗುಂಟು ಗಂಟಿನೊಳಗೊಂದು ಗಂಟು!
ತನುವೆಂಬ ಕೀಳುಹುಳು ನೆಲದಲ್ಲಿ ಹರಿಯುತಿರೆ,
ಮನದ ಪಾತರಗಿತ್ತಿ ಪಾರ್ವುದುಂಟು!

ಎಂದು ತನ್ನೀ ದ್ವಿತೀಯ ಜನ್ಮವನ್ನು ಹಾಡಿಕೊಳ್ಳುವನು. ಈ ಜನ್ಮ ದೇಹಕ್ಕಲ್ಲ—ಮನಕ್ಕೆ. ಈ ದ್ವಿಜತ್ವವನ್ನು ಪಡೆದಾಗ ಕವಿಯಾದ ತರುಣನು ಕಂಡ ಸತ್ಯಗಳನೇಕ.

'ಪ್ರೇಷ್ಠವಧರಕ್ಕೆ ಸಿಹಿ; ಶ್ರೇಷ್ಠವುದರಕ್ಕೆ ಸಿಹಿ'

ಎಂದೂ,

'ಇಲ್ಲಿ ಕೊಡುವಂಥವನು ಅಲ್ಲಿ ಪಡೆವ'

ಎಂದೂ,

'ಕೂಸಾಗಿ ಆಡಿ, ನಲ್ದಾಯಾಗಿ ಊಡಿ, ಕೊಡ-
ಗೂಸಾಗಿ ನೋಡುವದೆ ಅರಸುಗುರಿಯು!'

ಎಂದೂ,

‘ ಏಸು ತಾಳಿದರೇನು, ಏಸು ಬಾಳಿದರೇನು
ಈಸು ಮುಗುಳದಲಿ ಆ ದಿವ್ಯದೃಷ್ಟಿ ? ’

ಎಂದೂ ಅವನು ಕಂಡ ಕೆಲಮಾತುಗಳು. ಕೊನೆಗೆ ಸುತ್ತೂಕಡೆಯಿಂದಲೂ ಆ ತಾಯ್ಗರುಳೇ ತನ್ನವರು ನನ್ನವರಿಲ್ಲೆನಿಸುವ ಈ ಪರದೇಶಿಯನ್ನು ಉಡಿಯಲ್ಲಿಟ್ಟುಕೊಳ್ಳಲೆಂದು ಹರಕೆ ಬೇಡಿ, ‘ತಾಯಿತನವಿದ್ದಲ್ಲಿ ದೇವತನವಿದೆ’ ಯೆಂದು ತನ್ನ ಹಾಡಿನಲ್ಲಿ ಡಂಗುರ ಹೊಯ್ಯುವುದಾಗಿ ವಚನವನ್ನೀಯುವನು.

ಕವಿತೆಯು ಸಾಹಿತ್ಯ-ತತ್ತ್ವಜ್ಞಾನ ಸಂಸ್ಕಾರ ಸಂಪನ್ನವಿರುವುದರಿಂದ ‘ ವಿಚಾರಿತರಮಣೀಯ ’ ವಾಗಿದೆ.

* * * *

‘ ಆ ಮಧುರ ಭಾವಲೋಕವ ಹೊಕ್ಕು ನೋಡಿದೆನು.......... ’ ಇತ್ಯಾದಿ (ಪು. ೩೦):— ಸೂರ್ಯನು ರಾತ್ರಿರಮಣಿಯ ಅಂತಃಪುರವನ್ನು ಹುಡುಕುತ್ತ ಯುಗಯುಗಗಳಿಂದ ತಿರುಗುತ್ತಿರುವನು. ಆದರೆ ಅವನಿಗೆಂತು ಆಕೆ ದೊರೆಯುವಳು ? ಆ ಸೌಂದರ್ಯಲೋಕವು ಸ್ತ್ರೀಹೃದಯದಲ್ಲುಂಟು.

ಸೂರ್ಯ=ಬುದ್ಧಿ, ರಾತ್ರಿ=ಅಂತಃಕರಣ—ಎಂಬ ಸಂಕೇತವು ನನ್ನ ಕವನಗಳಲ್ಲಿ ಬೇರೆ ಬೇರೆ ಕಡೆ ಸೂಚಿತವಾಗಿದೆ.

ಈಶ್ವರರ (ಪು. ೩೨)=ಸಮರ್ಥರ

ಮುತ್ತುಗಳ ಗುತ್ತು (ಪು.೩೩)=ಗುತ್ತಾಗಿ ಬೆಳೆದ ಮುತ್ತುಗಳ ತೆನೆ.

ಬಿತ್ತು (ಪು. ೩೩)=ಬೀಜ

‘ನಿನ್ನೆರಕವೆರಕವನೆ ಹೊಯ್ದು....’(ಪು. ೩೪):—ಎರಕ=ಪ್ರೇಮ. ಎರಕ=ಅಕ್ಕಸಾಲಿಗನು ಹೊಯ್ಯುವ ಎರಕ.

‘ಎಲ್ಲಿ ನಡೆವುದು ಪೊಡವಿ.......’ ಇತ್ಯಾದಿ (ಪು. ೩೫):— ಈಶ್ವರನು ಕೊಡುಗೈಯಿಂದ ಕೊಡುತ್ತಿರುವನೆಂತಲೇ, ಈ ಜಗದ ಜೀವನ ಸಾಗುತ್ತಿದೆ. ಕೊಡುವುದೇ ಧರ್ಮ. ಕೊಡುವವನೇ ಪಡೆಯುವನು.

‘ ಇಕ್ಕು ಬಿಕ್ಕೆಯ! ಚೆಲುವಿಸಿಕ್ಕೆ ಬೇಕಾಗಿರಲು—’ (ಪು. ೩೬) ನಿನಗೆ ಸೌಂದರ್ಯಸಾಮ್ರಾಜ್ಯವು ಬೇಕಾಗಿದ್ದಲ್ಲಿ, ಆತ್ಮಸಮರ್ಪಣೆಯನ್ನು ಮಾಡು.

**ವಾಮದೇವ** (ಪು. ೩೭)

ಬಗೆಬಗೆಯಲಿ ಕತ್ತಲೆ ಕಿಡಿಸುವ ಕಿಡಿ=ಪ್ರತಿಬುದ್ಧಿಯಲ್ಲಿಯ ಅಜ್ಞಾನವನ್ನು ತೊಲಗಿಸುವ ಕಿಡಿ.

**ಕಾರಸಿರಿ** (ಪು. ೪೨)

‘ ಆ ’ ಯೀವ ವತ್ಸಲೆಯು. ಆ=ಹಾಲು (ಬಾಲಭಾಷೆಯಲ್ಲಿ).

**ಮಂಗಲವು ! ಜಯ ಮಂಗಲವು !!** (ಪು. ೪೫)

ನೆಲನೀರ್ಗಾಳಿಯ ಮುತ್ತುವ ಪಡೆಯನು=ಸೈನಿಕ–ನಾವಿಕ–ವೈಮಾನಿಕ ಬಲಗಳೆಂಬ ತ್ರಿವಿಧ ಸಮರಸನ್ನಾಹವನ್ನು.

**—ಗೆ** (ಪು. ೫೦)

‘ ಹೃದಯದಲ್ಲಿರಲಾರದೇಕೆ ಸಂಪೂರ್ತಿ? ’—ಆದರೂ ಹೃದಯದಲ್ಲಿ ಪರಿಪೂರ್ಣತೆಯ–ಪೂರ್ಣತೃಪ್ತಿಯ ಭಾವನೆಯು ಏಕೆ ಇರುವುದಿಲ್ಲ ?

**ನಾವಿಕರು** (ಪು. ೫೧)

ಮಿತ್ರವರ್ಯ ಹ. ಪೀ. ಜೋಶಿಯವರ ‘On an endless sea of songs we float’ ಎಂಬ ಇಂಗ್ಲಿಷ್ ಕವನದ ಭಾವಾನುವಾದ.

**ಹಗಲು** (ಪು. ೫೨)

ಹಗಲು=ಸೂರ್ಯ. ಈ ಕವನದ ವಾಚ್ಯಾರ್ಥವು ಸ್ಪಷ್ಟವೇ ಇದೆ; ಆದರೆ ವಾಚ್ಯಾರ್ಥದ ಹಿಂದಿರುವ ಸೂಚ್ಯಾರ್ಥವನ್ನೂ ಗಮನಿಸಬೇಕು. ಸೂರ್ಯ—ರಾತ್ರಿ—ಉಷೆ, ಇವರೆಲ್ಲ ಸಾಂಕೇತಿಕವಾಗಿ

ಇಲ್ಲಿ ಸೂಚಿತರಾಗಿದ್ದಾರೆ. (ಸೂರ್ಯ=ಜ್ಞಾನಶಕ್ತಿ. ರಾತ್ರಿ=ಭಾವಾಭಾಸ-Sentimentalism. ಉಷೆ=ಹೃದಯದೊಳಗಿನ ಗುಪ್ತಪ್ರೇಮ.)

**ಲಲಿತ ಲಾಸ್ಯ** (ಪು. ೫೪)

ತ್ರಿವಿಧ ಸೌಂದರ್ಯದ ಕಲ್ಪನೆಯನ್ನು ಸಾರರೂಪವಾಗಿ ರೇಖಿಸಿದೆ. ರೂಪ-ಭಾವ-ಛಂದ ಇವು ಸೌಂದರ್ಯದ ಕ್ರಮಾನುಭವದ ಸಂಕೇತಗಳು. ಹೆಚ್ಚಿನ ವಿವರಣೆಗಾಗಿ 'ಓರ್ವ ದೇವಿ' ಕವನದ ಟಿಪ್ಪಣಿ ನೋಡಿರಿ.



# ಒಪ್ಪೋಲೆ

| ತಪ್ಪು | ಒಪ್ಪು | ಪುಟ | ಸಾಲು |
|---|---|---|---|
| ಯುಜರಿವ | ಜರಿಯುವ | ೧೯ | ೭ |
| ಮೇಘರಾಘ | ಮೇಘರಾಗ | ೩೩ | ೧೪ |
| ಮನಮೂಗನಾಗಿರುವೆನು | ಮನಮೂಗನಾಗಿಹೆನು | ೪೩ | ೨೩ |
| ಜೆನ್ನ | ಚೆನ್ನ | ೫೬ | ೮ |

